# 'ಬಾಲ್ಯ ವಿವಾಹ'ದ ವಿರುದ್ಧ ಆಂದೋಲನ




ಜೋಸೆಫ್ ಡಿ'ಸೋಜ

---

ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್ (ಸಿ.ಡಬ್ಲ್ಯೂ.ಸಿ.)
ಕರ್ನಾಟಕ, 2005

# ‘ಬಾಲ್ಯ ವಿವಾಹ’ದ ವಿರುದ್ಧ ಆಂದೋಲನ

ನಿರೂಪಣೆ

**ಜೋಸೆಫ್ ಡಿ’ಸೋಜ**

ಸಂಪಾದನೆ

ಕವಿತಾ ರತ್ನ ಮತ್ತು ದಾಮೋದರ ಆಚಾರ್ಯ

***ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್ (ಸಿ.ಡಬ್ಲ್ಯು.ಸಿ)***
***ಕರ್ನಾಟಕ, 2005***

# 'ಬಾಲ್ಯ ವಿವಾಹ'ದ ವಿರುದ್ಧ ಆಂದೋಲನ

ಪ್ರಕಾಶಕರು :

ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್ (ಸಿ.ಡಬ್ಲ್ಯು.ಸಿ)
303/02, ಎಲ್.ಬಿ.ಶಾಸ್ತ್ರೀನಗರ,
ವಿಮಾನಪುರ - ಅಂಚೆ
ಬೆಂಗಳೂರು - 560 017
ದೂರವಾಣಿ : 080 - 25234611, 25234270
ಇ-ಮೈಲ್ : cwc@pobox.com
ವೆಬ್‌ಸೈಟ್ : www.workingchild.org



ಮರು ಮುದ್ರಣ : 2005

ಬೆಲೆ : ರೂ.10

ಪುಟಗಳು : 28

ನಿರೂಪಣೆ : ಜೋಸೆಫ್ ಡಿ'ಸೋಜ, ಸಿ.ಡಬ್ಲ್ಯು.ಸಿ

ಸಂಪಾದನೆ, ಸಹಾಯ : ಕವಿತಾ ರತ್ನ ಮತ್ತು ದಾಮೋದರ ಆಚಾರ್ಯ

ಮುಖಪುಟ ಚಿತ್ರ : ಬಿ.ಜಿ.ಗುಜ್ಜಾರ್

ಮುದ್ರಣ : ಕ್ರಿಯಾ ಪ್ರಕಾಶನ

ನಂ.12, 18ನೇ ಅಡ್ಡರಸ್ತೆ, ಎಸ್.ಆರ್.ನಗರ,
ಬೆಂಗಳೂರು -27
ದೂರವಾಣಿ : 22234369, ಮೊಬೈಲ್ : 94485 78021
ಇ- ಮೇಲ್ : samabalu@bgl.vsnl.net.in





# ಅರ್ಪಣೆ

'ಬಾಲ್ಯ ವಿವಾಹ'ದಂತಹ ಅನಿಷ್ಟ ಪದ್ಧತಿಯ
ವಿರುದ್ಧ ಹೋರಾಡುತ್ತಿರುವ ಭೀಮಸಂಘದ ಎಲ್ಲಾ
ಸದಸ್ಯರಿಗೆ ಈ ಕೈಪಿಡಿ ಅರ್ಪಿತ.

# ಕೃತಜ್ಞತೆಗಳು

ಈ ಕೈಪಿಡಿಯನ್ನು ಹೊರತರಲು ಸಹಕರಿಸಿದ
'ಭೀಮಸಂಘ', 'ನಮ್ಮಸಭಾ', 'ಮಕ್ಕಳ
ಪಂಚಾಯತ್' ಸದಸ್ಯರಿಗೆ ಮತ್ತು ಎಲ್ಲರಿಗೂ
ನಾವು ಚಿರಋಣಿಗಳಾಗಿದ್ದೇವೆ.

# ಓದುವ ಮುನ್ನ

ನಾವು ಸ್ವಯಂ ಸೇವಾ ಸಂಸ್ಥೆಯಾಗಿ, ನಮ್ಮ ಕಾರ್ಯಕ್ಷೇತ್ರದಲ್ಲಿ ಅನೇಕ ವರ್ಷಗಳಿಂದ **ಬಾಲ್ಯ ವಿವಾಹ** ಪದ್ಧತಿಯ ವಿರುದ್ಧ ಹೋರಾಡುತ್ತಾ ಬಂದಿದ್ದೇವೆ. ನಮ್ಮ ಅನುಭವದಲ್ಲಿ ಮಕ್ಕಳು ಬಾಲ್ಯ ವಿವಾಹದ ವಿರುದ್ಧ ಸಂಘಟಿತರಾಗಿ ಹೋರಾಟ ನಡೆಸಿದ್ದು ಇದೇ ಮೊದಲು. ಹೋರಾಟದಲ್ಲಿ ಅವರ ಜೊತೆ ಇದ್ದಿದ್ದರಿಂದ ನಮಗೆ, ಬಾಲ್ಯ ವಿವಾಹಕ್ಕೆ ಮೂಲ ಕಾರಣಗಳನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಅವುಗಳಿಗೆ ಅನೇಕ ರೀತಿಯ ಪರ್ಯಾಯಗಳನ್ನು ಅವರೊಂದಿಗೆ ಸೇರಿ ಹುಡುಕಲು ಸಾಧ್ಯವಾಗಿದೆ. ಹಲವು ಕಾರಣಗಳಿಗಾಗಿ ನಮ್ಮ ಪ್ರಯತ್ನದ ಯಶಸ್ಸು ಕೆಲ ಮಟ್ಟಿಗೆ ಮಾತ್ರ ಆಗಲು ಸಾಧ್ಯವಾಯಿತು. ಸರ್ಕಾರಿ ಅಧಿಕಾರಿಗಳು ಮತ್ತು ವ್ಯವಸ್ಥೆ ಈ ಸಮಸ್ಯೆಯ ನಿವಾರಣೆಗಾಗಿ ಸಹಕರಿಸದೇ ಇರುವುದು ಇದಕ್ಕೆ ಉಳಿದೆಲ್ಲಾದಕ್ಕಿಂತ ಮುಖ್ಯ ಕಾರಣ.

ಕೆಲವೇ ಜನರ ಹೋರಾಟದಿಂದ ಇಂತಹ ಸಮಸ್ಯೆಗಳು ಬಗೆಹರಿಯುವುದಿಲ್ಲ. ಆದರೆ ನಾವು ಸಾಕಷ್ಟು ಜನ ಒಟ್ಟು ಸೇರಿ ಕೆಲಸ ಮಾಡಲು ಸಾಧ್ಯವಾದರೆ, ಸರ್ಕಾರದ ಮೇಲೆ ಒತ್ತಡ ಹೇರಿ **ಬಾಲ್ಯ ವಿವಾಹದ** ವಿರುದ್ಧ ರಚನಾತ್ಮಕ ಕಾರ್ಯಕ್ರಮವನ್ನು ಮಾಡಲು ಸಾಧ್ಯ ಎಂಬುದು ನಮ್ಮ ನಂಬಿಕೆ. ಒಟ್ಟಾಗಿ ಹೋರಾಡಲು ಈ ಪುಸ್ತಕ ನಮಗೆಲ್ಲಾ ಸ್ಫೂರ್ತಿ ನೀಡಲಿ ಎಂದು ಆಶಿಸುತ್ತೇವೆ.

# 'ಬಾಲ್ಯ ವಿವಾಹ'ದ ವಿರುದ್ಧ ಆಂದೋಲನ

*-ಬಿ.ಮೋಹನ್‌ಚಂದ್ರ ಹಾಗೂ ಅನುರಾಧ ಶೆಟ್ಟಿ, ಸಿ.ಡಬ್ಲ್ಯೂ.ಸಿ.*

> "ನಾನು ಬಾಲ್ಯ ವಿವಾಹದ ವಿರುದ್ಧ ಹೋರಾಡಿ ಗೆಲುವು ಸಾಧಿಸಲು ನನಗಿದ್ದ ಸಂಘಟನೆಯ ಹಿನ್ನೆಲೆ ಒಂದು ಮುಖ್ಯ ಕಾರಣವಾಗಿದೆ. ನನ್ನ ಈ ಹೋರಾಟದಿಂದ ನನ್ನ ಹಳ್ಳಿಯ ಅನೇಕ ಮಕ್ಕಳಿಗೆ ಸ್ಫೂರ್ತಿ ಸಿಕ್ಕಿದೆ. ಇದರಿಂದ ನಡೆಯಬೇಕಾದ ಅನೇಕ ಬಾಲ್ಯ ವಿವಾಹಗಳು ನಿಂತು ಹೋಗಿವೆ".
>
> **- ಕು.ಉಚ್ಚೆಂಗಮ್ಮ, 15 ವರ್ಷ, ಭೀಮಸಂಘ - ರಾಜ್ಯಾಧ್ಯಕ್ಷೆ,**
> **ಹೊಳಗುಂದಿ, ಬಳ್ಳಾರಿ ಜಿಲ್ಲೆ.**
> ***2003***

**ಬಾ**ಲ್ಯ ವಿವಾಹ ನಮ್ಮ ದೇಶದಲ್ಲಿರುವ ಸಾಮಾಜಿಕ ಪಿಡುಗುಗಳಲ್ಲೊಂದು. ಕಾನೂನಿನ ಪ್ರಕಾರ ಈ ಪದ್ಧತಿಯು ನಿಷೇಧವಾಗಿದ್ದರೂ ಭಾರತದ ಕೆಲವು ಪ್ರದೇಶ ಹಾಗೂ ಹಳ್ಳಿಗಳಲ್ಲಿ ಈಗಲೂ ಆಚರಣೆಯಲ್ಲಿರುವುದನ್ನು ಕಾಣಬಹುದು. ಸಿ.ಡಬ್ಲ್ಯೂ.ಸಿ. (ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್) ಕೆಲಸ ಮಾಡುತ್ತಿರುವ ಉತ್ತರ ಕರ್ನಾಟಕದ ಬಳ್ಳಾರಿಯ ಕೆಲವು ಕಡೆಗಳಲ್ಲಿ ಈ ಪದ್ಧತಿಯ ಆಚರಣೆ ಇದಕ್ಕೆ ಒಂದು ಪ್ರತ್ಯಕ್ಷ ಸಾಕ್ಷಿಯಾಗಿದೆ. 2001ರಲ್ಲಿ ಸಿ.ಡಬ್ಲ್ಯೂ.ಸಿ.ಯು ನಡೆಸಿದ ಸಂಶೋಧನೆಯ ಪ್ರಕಾರ ಈ ಪ್ರದೇಶದಲ್ಲಿ ಮದುವೆಯಾಗುವ ಗಂಡಿನ ಸರಾಸರಿ ವಯಸ್ಸು 18.1 ಹಾಗೂ ಹೆಣ್ಣಿಗೆ ಸರಾಸರಿ 13.9 ವರ್ಷಗಳಷ್ಟಿದೆ ಮತ್ತು ಇಲ್ಲಿ ಕಡಿಮೆ ಪಕ್ಷ 60 'ಬಾಲ್ಯವಿವಾಹ'ವಾದ ದಂಪತಿಗಳನ್ನು ಗುರುತಿಸಲಾಗಿದೆ. ಹಾಗಾಗಿ ನಾವು 21ನೇ ಶತಮಾನಕ್ಕೆ ಪಾದಾರ್ಪಣೆ ಮಾಡಿದ್ದರೂ, ಅನೇಕ ಗಂಡು - ಹೆಣ್ಣು ಮಕ್ಕಳಿಗೆ ಈ ಪದ್ಧತಿಯು ಒಂದು ಕ್ರೂರ ಸತ್ಯವಾಗಿ ಉಳಿದಿದೆ. ದೊಡ್ಡವರು ಮಾಡಿದ್ದೇ ಸರಿ ಎಂದು ಈ ಪದ್ಧತಿಗೆ ಬಲಿಯಾಗಿದ್ದುದು ಅನೇಕ ಮಕ್ಕಳ ಕಥೆಯಾಗಿದೆ, ಇದಕ್ಕೆ ವಿರುದ್ಧವಾಗಿ ಹೋರಾಡಿ ಜಯಗಳಿಸಿದ ಘಟನೆಗಳು ಬಹಳ ವಿರಳ.

ಅಂತಹ ಒಂದು ವಿಶೇಷ ಘಟನೆ ಇಲ್ಲಿದೆ. ಉಚ್ಚಿಂಗಮ್ಮ ಮೂಲತ: ಕೃಷಿ ಕುಟುಂಬದಿಂದ ಬಂದಂತಹ 15 ವರ್ಷದ ದುಡಿಯುವ ಮಗು. ಹೆತ್ತವರ ಅಪೇಕ್ಷೆ ಮೇರೆಗೆ ಮತ್ತು ತನ್ನ ಸಮುದಾಯದ ಇತರ ಅನೇಕ ಮಕ್ಕಳಂತೆ ತನ್ನ ಶಿಕ್ಷಣವನ್ನು 6ನೇ ತರಗತಿಯಲ್ಲೇ ಮೊಟಕುಗೊಳಿಸಿ, ದುಡಿಯುವ ಮಗುವಾದಳು. ಶಾಲೆ ಬಿಟ್ಟ ಶುರುವಿನಲ್ಲಿ ಸಿ.ಡಬ್ಲ್ಯೂ.ಸಿ. ಕಾರ್ಯಕರ್ತರಿಂದ ಮಕ್ಕಳ ಸಂಘಟನೆ ಬಗ್ಗೆ ಮಾಹಿತಿ ಸಿಗುತ್ತಿತ್ತು. ಕುತೂಹಲಕ್ಕಾಗಿ 'ಭೀಮಸಂಘ'[1] ಮತ್ತು 'ಮಕ್ಕಳ ಪಂಚಾಯತ್'[2] ಸಭೆಗಳಿಗೆ ಹೋದಾಗ ಅಲ್ಲಿ ಚರ್ಚಿಸುತ್ತಿರುವ ವಿಷಯಗಳು ಆಸಕ್ತಿದಾಯಕವಾಗಿ ಕಂಡವು. ಕ್ರಮೇಣ 'ಭೀಮಸಂಘ' ಮತ್ತು 'ಮಕ್ಕಳ ಪಂಚಾಯತ್' ಸದಸ್ಯೆಯಾಗಿ ತನ್ನನ್ನು ತಾನು ತೊಡಗಿಸಿಕೊಂಡಳು. ಹತ್ತು ಹಲವು ಸಶಕ್ತತೆಯ ಮಾಹಿತಿ, ತರಬೇತಿ ಕಾರ್ಯಾಗಾರಗಳಲ್ಲಿ ಭಾಗವಹಿಸಿದಳು. ಮಕ್ಕಳ ಹಕ್ಕುಗಳು, ಶಿಕ್ಷಣ, ಭಾಗವಹಿಸುವಿಕೆ ಇತ್ಯಾದಿ ವಿಷಯಗಳ ಬಗ್ಗೆ ಮಾಹಿತಿ ಸಂಗ್ರಹಿಸಿಕೊಂಡಳು. ಇದೆಲ್ಲದರ ಪರಿಣಾಮವಾಗಿ 2002ರಲ್ಲಿ ಕರ್ನಾಟಕದ ಎಲ್ಲೆಡೆ ಪ್ರಚಲಿತಗೊಂಡಿರುವ 'ಭೀಮಸಂಘ'ದ ಹಾಗೂ 'ಮಕ್ಕಳ ಪಂಚಾಯತ್'ನ ರಾಜ್ಯಾಧ್ಯಕ್ಷೆಯಾಗಿ ಆಯ್ಕೆಗೊಂಡಳು.

---

1. 'ಭೀಮಸಂಘ', ಕರ್ನಾಟಕದಲ್ಲಿರುವ ದುಡಿಯುವ ಮಕ್ಕಳ ಸಂಘಟನೆ. 13,000 ಸದಸ್ಯರನ್ನೊಳಗೊಂಡು ತಮ್ಮ ಹಕ್ಕುಗಳನ್ನು ಪಡೆದುಕೊಳ್ಳಲು ಶ್ರಮಿಸುತ್ತಿರುವ ಸಂಘ.

2. 'ಮಕ್ಕಳ ಪಂಚಾಯತ್', ಸಿ.ಡಬ್ಲ್ಯೂ.ಸಿ ಕೆಲಸ ಮಾಡುತ್ತಿರುವ ಕ್ಷೇತ್ರಗಳಲ್ಲಿ ಮಕ್ಕಳಿಂದಲೇ ಆಯ್ಕೆಗೊಂಡ, ಮಕ್ಕಳಿಗಾಗಿ ಇರುವ ಸ್ಥಳೀಯ ಸರ್ಕಾರ. ಗ್ರಾಮ ಆಡಳಿತ ಮತ್ತು ನಿರ್ಣಯ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಭಾಗವಹಿಸುವ ಅವಕಾಶ ಮಕ್ಕಳಿಗೆ ಈ ಸರ್ಕಾರದ ಮೂಲಕ ದೊರಕಿದೆ.

ತನ್ನ ಸಂಘದ ಮೇಲೆ ಅಭಿಮಾನ, ಹೆಮ್ಮೆಯಿಟ್ಟುಕೊಂಡಿರುವ ಇವಳ ಹೇಳಿಕೆ :

> "ಸಂಘಕ್ಕೆ ಸೇರುವ ಮುನ್ನ ಯಾವುದು ಸರಿ, ಯಾವುದು ತಪ್ಪು ಎಂದು ಆಲೋಚಿಸುವ ಮಾಹಿತಿ ಇರಲಿಲ್ಲ. ಅಂತೆಯೇ ಹೆತ್ತವರು ಹೇಳಿದ ಪ್ರಕಾರ ಶಾಲೆಗೆ ಹೋಗುವುದನ್ನು ಬಿಟ್ಟು, ಹೊಲದ ಕೆಲಸದಲ್ಲಿ ತೊಡಗಿದೆ. ಯಾಕೆಂದರೆ, ಆಗ ನನಗೆ ದೊಡ್ಡವರ ಯಾವುದೇ ತೀರ್ಮಾನ ಸರಿ ಎಂದು ಅನಿಸುತ್ತಿತ್ತು. ಆದರೆ ಈಗ ನನ್ನ ಜೀವನದ ಬಗ್ಗೆ ತೀರ್ಮಾನ ಕೈಗೊಳ್ಳುವ ಆತ್ಮವಿಶ್ವಾಸ ನನ್ನಲ್ಲಿದೆ."
>
> **- ಕು.ಉಚ್ಚಿಂಗಮ್ಮ, ರಾಜ್ಯಾಧ್ಯಕ್ಷೆ, ಭೀಮಸಂಘ. 2003**

ಉಚ್ಚಿಂಗಮ್ಮ ಕುಂದಾಪುರದ 'ನಮ್ಮಭೂಮಿ[3] ಯಲ್ಲಿ ನಡೆದ ಅಂತರಾಷ್ಟ್ರೀಯ ಮಟ್ಟದ ಕಾರ್ಯಕ್ರಮ ಒಂದರಲ್ಲಿ ಭಾಗವಹಿಸಿದ ಸಮಯದಲ್ಲಿ ಮನೆಯವರು ತನಗೆ ಮದುವೆ ಮಾಡುವ ಯೋಜನೆಯಲ್ಲಿ ತೊಡಗಿರುವುದು ತಿಳಿಯಿತು. ಕೂಡಲೇ ನನಗೆ 18 ವರ್ಷ ಆಗುವವರೆಗೂ ಮತ್ತು ನನ್ನ ಕಾಲ ಮೇಲೆ ನಿಲ್ಲದವರೆಗೂ ಮದುವೆಯಾಗಲು ಒಲ್ಲೆ ಎಂದು ಹೆತ್ತವರ ಮನವೊಲಿಸಲು ಮಾಡಿದ ಪ್ರಯತ್ನ ನಿಷ್ಪ್ರಯೋಜಕವಾಯಿತು. ಅದಕ್ಕೆ ಕಾರಣ ಅವರ ಜನಾಂಗದ ಒತ್ತಡ ಹಾಗೂ ಮನೆಯವರಿಗೆ ಇದ್ದ ಪೂರ್ವಿಕರು ಮಾಡಿದ ಕಟ್ಟಳೆಯನ್ನು ದಾಟಬಾರದೆಂಬ ಭಾವನೆ. ಆ ಸಮಯದಲ್ಲಿ ಮನೆಯವರಿಗೆ ಒಂದು ಮಾತನ್ನು ನೀವೇ ಹೇಳಿ ಎಂದು ಸಿ.ಡಬ್ಲ್ಯೂ.ಸಿ. ಕಾರ್ಯಕರ್ತರ ಬೆಂಬಲ ಕೋರಿಕೊಂಡಳು. ಆದರೆ ಹೆತ್ತವರು ಅವರ ಜನಾಂಗದ ಒತ್ತಡವಿದ್ದರಿಂದ ಯಾರ ಮಾತನ್ನೂ ಕೇಳುವ ಸ್ಥಿತಿಯಲ್ಲಿರಲಿಲ್ಲ. 'ಯಾರು ಏನೇ ಅನ್ನಲಿ, ಮದುವೆ ಮಾಡಿಯೇ ತೀರುತ್ತೇವೆ' ಎಂದು ಮನೆಯವರು ಪಣತೊಟ್ಟರು. 'ಸಂಸ್ಥೆಯವರು ತೊಂದರೆ ಕೊಟ್ಟರೆ ಒಂದು ವಾರದೊಳಗೆ ಗುಟ್ಟಾಗಿ ಮದುವೆ ಮಾಡುತ್ತೇವೆ' ಎಂದು ಕೂಡಾ ಅಲ್ಲಿ ನೆರೆದಿದ್ದ ಸಮುದಾಯದಲ್ಲೊಬ್ಬರು ಹೇಳಿದರು.

---

3. 'ನಮ್ಮ ಭೂಮಿ', ಕುಂದಾಪುರದಲ್ಲಿರುವ ಸಿ.ಡಬ್ಲ್ಯೂ.ಸಿ.ಯ ಪ್ರಾದೇಶಿಕ ಸಂಪನ್ಮೂಲ ಮತ್ತು ವೃತ್ತಿ ತರಬೇತಿ ಕೇಂದ್ರ.

ಪರಿಸ್ಥಿತಿ ಹೀಗಿದ್ದ ಸಂದರ್ಭದಲ್ಲಿ ಸೋಲೊಪ್ಪದ ಉಚ್ಚೆಂಗಮ್ಮ ಕಂಡ ದಾರಿ, ಸ್ಥಳೀಯ ಜನರಿಗೆ ಮೇಲಿನ ಮಟ್ಟದಿಂದ ಕಾನೂನಿನ ಒತ್ತಾಯ ಬಂದಾಗ ಮತ್ತು 'ಬಾಲ್ಯವಿವಾಹ'ವು ಕಾನೂನಿನ ಉಲ್ಲಂಘನೆ ಎಂಬ ಮಾಹಿತಿಯು ಮನದಟ್ಟಾದಾಗ ಅದನ್ನು ಒಪ್ಪಲೇಬೇಕಾದ ಅನಿವಾರ್ಯತೆ ಉಂಟಾಗಬಹುದೆಂದು ಹಾಗೂ ಈ ಸಮಸ್ಯೆಯ ಪರಿಹಾರವು ಒಂದು ಮಗುವಿಗೇ ಸೀಮಿತವಾಗಿರದೆ ಇತರ ಅನೇಕ ಮಕ್ಕಳಿಗೂ ಇದರಿಂದ ಅನುಕೂಲವಾಗಬೇಕೆಂದು ಉಚ್ಚೆಂಗಮ್ಮಳು ತಾಲೂಕು ಮಟ್ಟದ ಪೋಲೀಸರಿಗೆ ಪತ್ರ ಬರೆದಳು. ಅವಳ ಈ ಒಂದು ಹೆಜ್ಜೆಯು ಬೇಗನೆ, ಉತ್ತಮ ಪರಿಣಾಮ ಬೀರುವಂತೆ ಮಾಡಿತು. ತಕ್ಷಣಕ್ಕೆ ಪ್ರತಿಕ್ರಿಯಿಸುತ್ತಾ, ಹಡಗಲಿ ತಾಲೂಕಿನ ಪೊಲೀಸರು ಉಚ್ಚೆಂಗಮ್ಮಳ ರಕ್ಷಣೆಗಾಗಿ ಧಾವಿಸಿದರು. ತಾನು ಪತ್ರ ಬರೆದ ಕೂಡಲೇ ಇಷ್ಟು ಬೇಗ ಪೋಲೀಸರು ಸ್ಪಂದಿಸುತ್ತಾರೆಂಬ ನಂಬಿಕೆ ಉಚ್ಚೆಂಗಮ್ಮಳಿಗಿರಲಿಲ್ಲ. ಅವರು 'ಬಾಲ್ಯವಿವಾಹ'ದ ಕೆಟ್ಟ ಪರಿಣಾಮಗಳ ಬಗ್ಗೆ ಉಚ್ಚೆಂಗಮ್ಮಳ ಮನೆಯವರಿಗೆ ಮತ್ತು ಸ್ಟೇಷನ್ ಅಕ್ಕ-ಪಕ್ಕ ನೆರೆದಿದ್ದ ಜನರಿಗೆ ತಿಳಿ ಹೇಳುತ್ತಾ, ಕಾನೂನಿನ ವಿರುದ್ಧ ಹೋದರೆ ಪರಿಣಾಮ ತುಂಬಾ ಕೆಟ್ಟದಾಗಬಹುದೆಂದು ವಿವರಿಸಿದಳು. ಧೈರ್ಯದ ಈ ಹುಡುಗಿ ಜೊತೆ ನಾವಿದ್ದೇವೆ ಎಂದು ಬೆಂಬಲ ಸೂಚಿಸಿದರು. ಉಚ್ಚೆಂಗಮ್ಮಳ ದಿಟ್ಟತನಕ್ಕೆ ಇದೊಂದು ದೊಡ್ಡ ಹೆಜ್ಜೆಯಾಯಿತು.

ಈ ಘಟನೆಯಿಂದ ಅಪಮಾನಿತರಾದ ಕೆಲವು ಜನರು 'ನಿಮ್ಮ ಮಗಳಿಂದ ನಮ್ಮ ಮರ್ಯಾದೆ ಹೋಯಿತು' ಎಂದು ಹೇಳಿ ಒತ್ತಡ ಹೇರುತ್ತಿದ್ದರು. ಉಚ್ಚೆಂಗಮ್ಮಳನ್ನು ಹೊರಗಡೆ ಹೋಗದಂತೆ ಮನೆಯಲ್ಲಿ ಕೂಡಿ ಹಾಕಲಾಯಿತು. ಕೆಲಜನರ ವಕ್ರ ದೃಷ್ಟಿ, ಕೆಟ್ಟ ಮಾತುಗಳು ತನ್ನ ಮೇಲೆ ಹರಿಯುತ್ತಿದ್ದರೂ, ಅವಳು ತನ್ನ ನಿರ್ಧಾರ ಮಾತ್ರ ಬದಲಾಯಿಸಲಿಲ್ಲ. ಆ ಊರಿನ 'ಮಕ್ಕಳ ಮಿತ್ರ'[4] ಮತ್ತು ಮಾಜಿ ಪಂಚಾಯತ್ ಅಧ್ಯಕ್ಷರಾದ ಶ್ರೀ.ಎ.ಜಿ.ವೀರಣ್ಣಗೌಡರು ಉಚ್ಚೆಂಗಮ್ಮಳಿಗೆ ಸಂಪೂರ್ಣ ಸಹಾಯ, ಬೆಂಬಲ ನೀಡಿದ್ದು.

---

**4.** 'ಮಕ್ಕಳ ಮಿತ್ರ', ಸಮುದಾಯದಲ್ಲಿ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿರುವ ಮಕ್ಕಳಿಗೆ ಸಹಾಯ ಮಾಡಲು ಬದ್ಧತೆ ಹೊಂದಿರುವ ವ್ಯಕ್ತಿ. ಇವರನ್ನು ಊರಿನ ಮಕ್ಕಳೇ ಆಯ್ಕೆ ಮಾಡುತ್ತಾರೆ.

ಆಕೆಯ ಕುಟುಂಬದೊಂದಿಗೆ ಮಾತುಕಥೆ ಮಾಡಿ, ಈ ವಿಷಯ ದೊಡ್ಡ ಘರ್ಷಣೆಯಾಗಿ ತಿರುಗುವ ಮುಂಚೆಯೇ ಮನೆ ಮಟ್ಟದಲ್ಲಿ ಪರಿಹಾರ ಹೊಂದಿಸಲು ಬಹಳ ಪ್ರಯತ್ನಿಸಿದರು. ಏಕೆಂದರೆ ಅವರಿಗೆ 'ಬಾಲ್ಯ ವಿವಾಹ'ದ ಪದ್ಧತಿಯ ಸೂಕ್ಷ್ಮತೆಗಳು ಮತ್ತು ಅದರ ಬಗ್ಗೆ ಜನರಿಗಿರುವ ಅಭಿಪ್ರಾಯಗಳ ಕುರಿತು ಆಳವಾದ ಮಾಹಿತಿ ಇತ್ತು.

> *"ಬಾಲ್ಯ ವಿವಾಹ ತಡೆಗಟ್ಟಲು ಹೊರಟ ಉಚ್ಚೆಂಗಮ್ಮಳಿಗೆ ನನ್ನ ಅಭಿನಂದನೆಗಳು. ತನಗೆ ರಕ್ಷಣೆ ಬೇಕೆಂದು ಕೋರಿದ ಉಚ್ಚೆಂಗಮ್ಮಳಿಗೆ ತಕ್ಷಣ ಕಾನೂನು ಕ್ರಮ ಸಿಗುವಂತೆ ಸ್ಥಳೀಯ ಪೋಲೀಸ್ ಅಧಿಕಾರಿಗಳಿಗೆ ಪತ್ರ ಬರೆದಿದ್ದೇನೆ".*
>
> **- ಶ್ರೀ.ಎಸ್.ಎಂ.ಕೃಷ್ಣ - ಮುಖ್ಯಮಂತ್ರಿಗಳು, ಕರ್ನಾಟಕ,2002**

ಊರಿನ ಆಗು-ಹೋಗುಗಳನ್ನು ತನ್ನ ಸಂಘದ ಸದಸ್ಯರ ಮೂಲಕ ತಿಳಿದುಕೊಳ್ಳುತ್ತಿದ್ದ ಉಚ್ಚೆಂಗಮ್ಮ ಮನೆಯಲ್ಲಿದ್ದುಕೊಂಡು ತಾನು ಏನೂ ಮಾಡಲಾಗದು ಎಂದು, ತನ್ನ ಮನೆಯವರು ಕೇಸ್ ವಾಪಾಸ್ ತೆಗೆದುಕೊಳ್ಳಲು ಒತ್ತಡ ಹೇರುತ್ತಿರುವ ಸಮಯದಲ್ಲಿ 'ನನ್ನ ಹೀಗೆ ಮನೆಯಲ್ಲಿ ಕೂಡಿ ಹಾಕಿದರೆ, ನಿನ್ನೆ ಹಡಗಲಿಯಿಂದ ಪೋಲಿಸರು ಬಂದಿದ್ದಾರೆ, ನಾಳೆ ಬಳ್ಳಾರಿಯಿಂದಲೂ ಬರ್ತಾರೆ. ನೀವೆಲ್ಲಾ ನನ್ನ ಹೊರಗಡೆ ಬಿಟ್ಟರೆ ಕುಂದಾಪುರಕ್ಕೆ ಹೋಗಿ ಕೇಸ್ ವಾಪಸ್ ತೆಗೆದು ಹಾಕಿ ಬರ್ತೇನೆ' ಎಂದು ಹೇಳಿದಳು. ಇದನ್ನು ನಂಬಿದ ಮನೆಯವರು ಒಂದು ದಿನದ ಸಮಯ ನೀಡಿ ಕುಂದಾಪುರಕ್ಕೆ ಹೋಗಲು ಅನುಮತಿ ನೀಡಿದರು. ವಿಷಯ ತಿಳಿದ 'ಮಕ್ಕಳ ಮಿತ್ರ'ರಾದ ಶ್ರೀ.ಎ.ಜಿ.ವೀರಣ್ಣಗೌಡರು ಮತ್ತೊಮ್ಮೆ ಹೆತ್ತವರನ್ನು ಕರೆಯಿಸಿ, ಮನಮುಟ್ಟುವಂತೆ ತಿಳಿ ಹೇಳಲು ಪ್ರಯತ್ನಿಸಿದರು.

ಉಚ್ಚೆಂಗಮ್ಮ ಕುಂದಾಪುರದ 'ನಮ್ಮ ಭೂಮಿ'ಯಲ್ಲಿದ್ದುಕೊಂಡು ಎಲ್ಲಾ ರಾಷ್ಟ್ರೀಯ, ಅಂತರಾಷ್ಟ್ರೀಯ ಸಂಘ-ಸಂಸ್ಥೆಗಳು, ಮಕ್ಕಳ ಸಂಘಟನೆಗಳು, ಸರಕಾರಿ ಇಲಾಖೆ, ಜನಪ್ರತಿನಿಧಿಗಳು, ಪತ್ರಿಕೋದ್ಯಮಿಗಳೊಂದಿಗೆ ತನ್ನ ಹೋರಾಟದ ನಿಲುವುಗಳನ್ನು ವ್ಯಕ್ತಪಡಿಸಿ, ಬೆಂಬಲ ಕೋರಿದಳು. ಸುದ್ದಿಯನ್ನು

ತಿಳಿದ ಅನೇಕರು ಪ್ರತ್ಯಕ್ಷ ಹಾಗೂ ಪರೋಕ್ಷ ಸಹಕಾರ ನೀಡುವ ಭರವಸೆಯಿತ್ತರು. ಅನಂತರ, ತನ್ನ ಹೋರಾಟವನ್ನು ನಮ್ಮ ಊರಿನಲ್ಲೇ ಇದ್ದು ಎದುರಿಸುವೆ ಎಂಬ ಉಚ್ಚೆಂಗಮ್ಮಳ ನಿರ್ಧಾರದಿಂದ 'ಬಾಲ್ಯ ವಿವಾಹ' ಎಂಬ ಕೆಟ್ಟ ಪದ್ಧತಿ ವಿರುದ್ಧದ ಹೋರಾಟ ಹೊಳಗುಂದಿಯಲ್ಲಿ ತಲೆಯೆತ್ತಿತು.

ಉಚ್ಚೆಂಗಮ್ಮಳ ಈ ಪ್ರತಿಭಟನೆ ಅವಳ ವೈಯಕ್ತಿಕ ಹೋರಾಟ ಮಾತ್ರವಲ್ಲ, ಇಡೀ 'ಭೀಮಸಂಘ'ದ ಹೋರಾಟವಾಗಿ ಮಾರ್ಪಟ್ಟಿತು. ಕರ್ನಾಟಕದ ಸಿರ್ಸಿ, ಕುಂದಾಪುರ, ಬೆಂಗಳೂರು, ದಾವಣಗೆರೆ ಹಾಗೂ ಬಳ್ಳಾರಿಯ 'ಭೀಮಸಂಘ'ದ ಸದಸ್ಯರು ಪತ್ರದ ಮೂಲಕ ಹಾಗೂ ಪ್ರತ್ಯಕ್ಷವಾಗಿ ಭೇಟಿ ನೀಡಿ, ಮನೆ- ಮನೆಗೆ **'ಬಾಲ್ಯ ವಿವಾಹ'**ದ ದುಷ್ಪರಿಣಾಮಗಳ ಬಗ್ಗೆ ಚಿಕ್ಕ ಚಿಕ್ಕ ಗುಂಪುಗಳಲ್ಲಿ ಹೋಗಿ ಇಡೀ ಪಂಚಾಯತ್‌ನಲ್ಲಿ ಜನರಿಗೆ ಅರಿವು ಮೂಡಿಸಲು ಪ್ರಯತ್ನಿಸಿದರು.

ಈ ಸಂದರ್ಭದಲ್ಲಿ ಜೂನ್ 11,2002ರಂದು ಹಡಗಲಿ ಶಾಸಕರಾದ ಶ್ರೀ ವಿ.ಬಿ.ಹಾಲಪ್ಪನವರು ಹೊಳಗುಂದಿಗೆ ಭೇಟಿ ನೀಡಿ ಶಾಲಾ ವಠಾರದಲ್ಲಿ 'ಮಕ್ಕಳ ಮಿತ್ರ'ರು ಮತ್ತು ಸಂಸ್ಥೆಯವರು ಏರ್ಪಡಿಸಿದ ಸಭೆಯಲ್ಲಿ **'ಬಾಲ್ಯ ವಿವಾಹ'**ದ ವಿರುದ್ಧದ ಆಂದೋಲನಕ್ಕೆ ಚಾಲನೆ ನೀಡಿದರು. ಈ ಸಭೆಯು ಹೊಳಗುಂದಿಯ ಇತಿಹಾಸದಲ್ಲಿ ಒಂದು ವಿಶೇಷವಾದ ಘಟನೆಯಾಗಿತ್ತು. ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರುಗಳು, ಸ್ಥಳೀಯ ಸಂಘ-ಸಂಸ್ಥೆಗಳ ಪ್ರತಿನಿಧಿಗಳು, 'ಮಕ್ಕಳ ಮಿತ್ರ', 'ಭೀಮಸಂಘ', 'ನಮ್ಮ ಸಭಾ'[5] ಹಾಗೂ ಸಿ.ಡಬ್ಲ್ಯೂ.ಸಿ. ಪ್ರತಿನಿಧಿಗಳು, ಪಂಚಾಯತ್ ಮುಖಂಡರುಗಳು ಉಪಸ್ಥಿತರಿದ್ದರು. ಉಚ್ಚೆಂಗಮ್ಮಳ ಮತ್ತು 'ಭೀಮಸಂಘ'ದ ಈ ಪ್ರತಿಭಟನೆಯಿಂದಾಗಿ ಇದೊಂದು ಚರ್ಚಿಸುವಂತಹ ವಿಷಯವೆಂದು ಮನಗಂಡ ಊರಿನ ಜನತೆಯು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಶಾಸಕರು, ಉಚ್ಚೆಂಗಮ್ಮಳ ಸಾಹಸಕ್ಕೆ ಹೆಮ್ಮೆ ಪಟ್ಟು, 'ಭೀಮಸಂಘ' ಕೈಗೊಳ್ಳುತ್ತಿರುವ ಎಲ್ಲಾ ಕೆಲಸಕ್ಕೂ ತನ್ನ ಸಹಕಾರದ ಭರವಸೆಯಿತ್ತರು.

---

**5.'ನಮ್ಮ ಸಭಾ', 18 ವರ್ಷದಾಟಿದ ಮಾಜಿ ಭೀಮಸಂಘ ಸದಸ್ಯರು ಸ್ಥಾಪಿಸಿರುವ, ಕುಶಲಕರ್ಮಿಗಳು ಹಾಗೂ ಇತರೆ ಕಸುಬುಗಳಲ್ಲಿ ತೊಡಗಿರುವ ಸಂಘಟನೆ.**

> "ನಿಮ್ಮಿಂದ.....(ಭಾರತದ ಮಕ್ಕಳಿಂದ) ದೃಢ ಸಂಕಲ್ಪ ಹಾಗೂ ಗಟ್ಟಿತನದ ಬಗ್ಗೆ ಸಾಕಷ್ಟು ಕಲಿತುಕೊಂಡಿದ್ದೇವೆ. ನಾವು ಹಿರಿಯರು ನಮ್ಮ ಮಿತಿಗಳನ್ನು ಧೈರ್ಯದಿಂದ ಎದುರಿಸಿ, ಮಕ್ಕಳು ಸಮಾನ ಪಾಲುದಾರರೆಂದು ಒಪ್ಪಿಕೊಂಡಿದ್ದೇವೆ. ಬಂದ ಆಪತ್ತನ್ನು ಎದುರಿಸಿ, ಜಯಗಳಿಸುತ್ತೀರಿ ಎಂಬ ನಂಬಿಕೆ ನಮಗಿದೆ. ನಿಮ್ಮ ಯಶಸ್ಸಿಗಾಗಿ ಹೋರಾಡಿರಿ, ಅದು ನಿಮ್ಮ ಯಶಸ್ಸು ಮಾತ್ರವಲ್ಲ ಇತರ ಅನೇಕ ಮಕ್ಕಳದ್ದೂ ಹೌದು."
>
> **ಕ್ಯಾರೊಲಿನ್ ಚಿಕ್ಕೂರೆ, 'ಸೇವ್ ದ ಚಿಲ್ಡ್ರನ್ ನಾರ್ವೆ', ಜಿಂಬಾಬ್ವೆ.**

ಮೂಢನಂಬಿಕೆಗಳಿಗೆ ಬಲಿಯಾಗದೆ ಶಿಕ್ಷಣಕ್ಕೆ ಮಹತ್ವ ಕೊಡಬೇಕು ಎಂದು ಒತ್ತುಕೊಟ್ಟರು. ಶ್ರೀ.ಎ.ಜಿ.ವೀರಣ್ಣಗೌಡರು, ಮಕ್ಕಳು ಈ ಪದ್ಧತಿಗೆ ಒಳಗಾಗಬಾರದು, ಅದಕ್ಕಾಗಿ ಅವರ ವಿದ್ಯಾಭ್ಯಾಸ ಹಾಗೂ ಮಾಹಿತಿಯ ಮಟ್ಟ ಹೆಚ್ಚಿಸಬೇಕೆಂದು ಸಭೆಯನ್ನುದ್ದೇಶಿಸಿ ಹೇಳಿದರು.

ಮರುದಿನದಂದು ಪರಿಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿಸಿದೆಯೆಂದು ಉಚ್ಚಂಗಮ್ಮ ಎಂದಿನಂತೆ ತನ್ನ 'ಭೀಮಸಂಘ'ದ ಕಾರ್ಯ ಚಟುವಟಿಕೆ ಹಾಗೂ ಹೊಲಿಗೆ ತರಬೇತಿಯಲ್ಲಿ ಮಗ್ನಳಾದಳು. ಆದರೆ ಸ್ವಲ್ಪ ದಿನದಲ್ಲೇ ಸ್ಥಳೀಯ ಸಮುದಾಯದಲ್ಲೊಬ್ಬರು ಸಿ.ಡಬ್ಲ್ಯೂ.ಸಿ. ಹಾಗೂ 'ಭೀಮಸಂಘ'ದ ವಿರುದ್ಧ ಇಲ್ಲ ಸಲ್ಲದ ವಿಷಯಗಳನ್ನು ಪತ್ರಿಕೆಯಲ್ಲಿ ಪ್ರಕಟಿಸುವ ಪಿತೂರಿ ನಡೆಸಿದರು.

ಇದೇ ಸಮಯದಲ್ಲಿ ಉಚ್ಚಂಗಮ್ಮಳ ತಂದೆಗೆ ತನ್ನನ್ನು ಸಮುದಾಯದಿಂದ ಹೊರಗಿಡಬಹುದೆಂಬ ಭಯವೂ ಕಾಡುತ್ತಿತ್ತು. ಆದರೆ ಗ್ರಾಮ ಪಂಚಾಯತ್ ಆವರಣದಲ್ಲಿ 'ಮಕ್ಕಳ ಮಿತ್ರರು', ಪಂಚಾಯತ್ ಅಧ್ಯಕ್ಷರು, ಸಮುದಾಯದ ಮುಖಂಡರು, ಉಚ್ಚಂಗಮ್ಮಳ ಪೋಷಕರು, ದೈವಸ್ಥರು ಹಾಗೂ ಸಿ.ಡಬ್ಲ್ಯೂ.ಸಿ. ಪ್ರತಿನಿಧಿಗಳು ಸಭೆ ಸೇರಿದ್ದಾಗ ಈ ವಿಷಯ ಪ್ರಸ್ತಾಪವಾಗಿ ದೈವಸ್ಥರೊಂದಿಗೆ ಚರ್ಚಿಸಿ, ಹಾಗೆ ಮಾಡುವುದಿಲ್ಲ ಎಂದು ತೀರ್ಮಾನವಾಯಿತು. ಕೊನೆಗೆ ಎಲ್ಲರೂ ಉಚ್ಚಂಗಮ್ಮಳನ್ನು ಬೆಂಬಲಿಸುವುದೆಂದು ಅಭಿಪ್ರಾಯಪಟ್ಟರು.

ಈ ಸಭೆಯ ಕೆಲವು ದಿನಗಳ ನಂತರ ಊರಲ್ಲಿ 'ಮಕ್ಕಳ ಮಿತ್ರ'ರು ದೈವಸ್ಥರ ಸಭೆ ಮಾಡಿ, **'ಬಾಲ್ಯ ವಿವಾಹ'** ಪದ್ಧತಿ ಊರಲ್ಲಿ ಇರದಂತೆ ನೋಡಿಕೊಳ್ಳುವುದು, ಉಚ್ಚೆಂಗಮ್ಮ ಹಾಗೂ ಅವಳ ಕುಟುಂಬದವರಿಗೆ ರಕ್ಷಣೆ ನೀಡುವುದರ ಬಗ್ಗೆ ಚರ್ಚಿಸಿದರು.

" ನಿಮ್ಮ ಉತ್ಸಾಹ, ಸಮರ್ಪಣೆ ಹಾಗೂ ಧೈರ್ಯದ ಬಗ್ಗೆ ಹೆಮ್ಮೆ ಅನಿಸುತ್ತದೆ....... ದಿನದ ಕೊನೆಯಲ್ಲಿ ನಗುವು ನಿಮ್ಮ ಮುಖದಲ್ಲಿರಲಿ. ನಿಮ್ಮ ಚಳುವಳಿ ಸಮುದಾಯದ ಅರಿವು ಹೆಚ್ಚಿಸಲು ಹಾಗೂ ನಿಮ್ಮ ಭವಿಷ್ಯ ಸಮೃದ್ಧಿಗೊಳ್ಳಲು, ಒಳ್ಳೆಯ ನಾಳೆಗಾಗಿ ನಿಮ್ಮ ಸಂಘವು ಬೆಳಕು ಹರಿಸುವಂತಾಗಲಿ."

**- ಕಮಲಾಕರ್ ಭಟ್, ಪೂನೆ ವಿಶ್ವ ವಿದ್ಯಾನಿಲಯ.**

ಮೊದಲಿನಿಂದಲೂ ಮಕ್ಕಳ ಶೋಷಣೆ ವಿರುದ್ಧ ಸಹಾಯ ಹಸ್ತ ನೀಡುತ್ತಾ ಬಂದಿದ್ದ ಸಿ.ಡಬ್ಲ್ಯೂ.ಸಿ. ಪ್ರತಿನಿಧಿಗಳು ಹಾಗೂ 'ಭೀಮಸಂಘ'ದ ಪ್ರತಿನಿಧಿಗಳು ಈ ಸಭೆಯಲ್ಲಿ ಉಪಸ್ಥಿತರಿದ್ದರು. ಆದರೆ ಅಲ್ಲಿ, ಕಾಲೊನಿಯ ಯುವಕರ ಅಸಭ್ಯ ವರ್ತನೆ ಹಾಗೂ 'ಭೀಮಸಂಘ' ಮತ್ತು ಸಂಸ್ಥೆಯ ವಿರುದ್ಧ ಕೂಗಿದ ಘೋಷಣೆ ಆ ಸಭೆಯನ್ನು ಅರ್ಧಕ್ಕೆ ನಿಲ್ಲಿಸಿತು. ತಾವು ತಂದ ಮದುವೆ ಪ್ರಸ್ತಾಪ ತಿರಸ್ಕರಿಸಲ್ಪಟ್ಟಿದ್ದು, ನಂತರ ಪೋಲೀಸರ ಆಗಮನ ಹಾಗೂ ಹೆಚ್ಚಿನ ಎಲ್ಲಾ ಪತ್ರಿಕೆಗಳಲ್ಲಿ ಈ ವಿಷಯವನ್ನು ಎತ್ತಿ ತೋರಿಸಿದ್ದು ಒಂದು ದೊಡ್ಡ ಅವಮಾನವೆಂಬ ಭಾವನೆ, ಇವೆಲ್ಲದಕ್ಕೆ ಕಾರಣ ಎನ್ನಬಹುದು. ಇದರ ಪರಿಣಾಮವಾಗಿ ಈ ಎಲ್ಲಾ ಗೊಂದಲಕ್ಕೆ ನನ್ನ ಮಗಳೇ ಕಾರಣ, ಅದಕ್ಕಾಗಿ ಅವಳು ಎಲ್ಲಿಗೂ ಹೋಗುವುದು ಬೇಡ, ಹೊಲದ ಕೆಲಸ ಮಾಡಿಕೊಂಡು ಇರಲಿ ಎಂದು ಪುನ: ಉಚ್ಚೆಂಗಮ್ಮಳ ಭಾಗವಹಿಸುವಿಕೆಗೆ ಹೆತ್ತವರು ಅಡ್ಡಿಬಂದರು. ಆದರೆ ಪರಿಸ್ಥಿತಿ ಹತೋಟಿ ಮೀರದಂತೆ 'ಮಕ್ಕಳ ಮಿತ್ರ' ಹಾಗೂ ಸಂಸ್ಥೆಯವರು ಸತತ ಪ್ರಯತ್ನ ಮಾತುಕತೆಗಳನ್ನು ಮುಂದುವರಿಸಿದರು. ಇದರಿಂದ ಪರಿಸ್ಥಿತಿ ಸ್ವಲ್ಪ ಶಾಂತವಾಯಿತು.

"ಬಾಲ್ಯ ವಿವಾಹ ನಿಲ್ಲಿಸಿದರೆ ವರದಕ್ಷಿಣೆ ಸಮಸ್ಯೆಯನ್ನು ತಡೆಗಟ್ಟಬಹುದು. ಏಕೆಂದರೆ ವಯಸ್ಸು ಕಡಿಮೆ ಇದ್ದಾಗ ವರದಕ್ಷಿಣೆ ಜಾಸ್ತಿ ಕೇಳುತ್ತಾರೆ. ವಯಸ್ಸು ಜಾಸ್ತಿಯಾದಾಗ ವರದಕ್ಷಿಣೆ ಖಂಡಿತ ನಿಲ್ಲಿಸಬಹುದು".

**- ಶ್ರೀ. ಎ.ಜಿ ವೀರಣ್ಣಗೌಡರು, ಮಾಜಿ ಪಂಚಾಯತ್ ಅಧ್ಯಕ್ಷರು ಹಾಗೂ ಮಕ್ಕಳ ಮಿತ್ರ ಹೊಳಗುಂದಿ, ಬಳ್ಳಾರಿ.**

ಅವರು ಜನಾಂಗದ ದೈವಸ್ಥರನ್ನೂ ವಿಶ್ವಾಸಕ್ಕೆ ತೆಗೆದುಕೊಂಡು ಬಾಲ್ಯ ವಿವಾಹದ ವಿರುದ್ಧ ಅವರಲ್ಲಿ ಅಭಿಪ್ರಾಯ ಮೂಡಿಸಲು ಸಮರ್ಥರಾದರು.

ಉಚ್ಚೆಂಗಮ್ಮಳು ಗೃಹಬಂಧನದಲ್ಲಿದ್ದ ಸಂದರ್ಭಧಲ್ಲಿ ಸಂಸ್ಥೆ ಹಾಗೂ 'ಭೀಮಸಂಘ' ಅವಳೊಂದಿಗೆ ಯಾವುದೇ ರೀತಿಯ ಸಂಪರ್ಕ ಇಟ್ಟುಕೊಳ್ಳುವುದು ತುಂಬಾ ಕಷ್ಟವಾಗಿತ್ತು. ಈ ಮಧ್ಯೆ ಯಾರಾದರೂ ಅವಳ ಮನೆಗೆ ಹೋದರೆ ಮನೆಯವರು ತುಂಬಾ ಕೆಟ್ಟದಾಗಿ ಬೈದು, ಉಚ್ಚೆಂಗಮ್ಮಳ ಭೇಟಿಗೆ ಅಡ್ಡಿ ಬರುತ್ತಿದ್ದರು. ಹಾಗಾಗಿ ಭೀಮಸಂಘ ಮತ್ತು ಸಂಸ್ಥೆಯೊಂದಿಗಿನ ಉಚ್ಚೆಂಗಮ್ಮಳ ಸಂಪರ್ಕ ಸ್ಥಗಿತಗೊಂಡಿತು. ಆದರೆ, ಮರು ಸಂಪರ್ಕ ಕಲ್ಪಿಸುವುದು ಅತೀ ಮುಖ್ಯವಾಗಿತ್ತು. ಈ ಸಮಯದಲ್ಲಿ ಗ್ರಾಮ ಮಟ್ಟದ ಕಾರ್ಯಕರ್ತರೊಬ್ಬರಿಂದ ವಿಷಯ ತಿಳಿದ ಅಮೀನಾ (ಭೀಮಸಂಘದ ಸದಸ್ಯೆ) ಎಂಬ ಮೊಸರು ಮಾರುವ ಹುಡುಗಿ, 'ನಾನು ಖಂಡಿತ ಉಚ್ಚೆಂಗಮ್ಮಳಿಗೆ ಸಹಾಯ ಮಾಡುತ್ತೇನೆ. ನನಗೆ ಧೈರ್ಯ ಇದೆ. ಅವರ ಮನೆಯಲ್ಲಿ ಮೊಸರು ತೆಗೆದುಕೊಳ್ಳದಿದ್ದರೂ ಉಚ್ಚೆಂಗಮ್ಮಳ ಸ್ನೇಹಿತೆಯಾಗಿ ಅವಳನ್ನು ಮಾತನಾಡಿಸುತ್ತೇನೆ' ಎಂದು ಜವಾಬ್ದಾರಿ ತೆಗೆದುಕೊಂಡಳು. ಅಂದಿನಿಂದ ಅಮೀನಾ ಮೊಸರು ತೆಗೆದುಕೊಂಡು ಉಚ್ಚೆಂಗಮ್ಮಳ ಮನೆಯ ಹತ್ತಿರ ಅಡ್ಡಾಡಿ ಸಂಘದಿಂದ ಪಡೆದ ಪತ್ರ, ಸುದ್ದಿಗಳನ್ನು ಉಚ್ಚೆಂಗಮ್ಮಳಿಗೆ ನೇರವಾಗಿ ತಲುಪಿಸುತ್ತಿದ್ದಳು.

ಈ ಪ್ರಕ್ರಿಯೆ 4-5 ಬಾರಿ ನಡೆಯಿತು. ಅಮೀನಾ ಮೊಸರು ತಂದಳೆಂದರೆ, ಉಚ್ಚೆಂಗಮ್ಮ ಏನೋ ಸುದ್ದಿ ಬಂತು ಎಂದು ಖುಷಿಯಿಂದ ಹೊರಗೋಡಿ ಬಂದು ಮಾಹಿತಿ ಪಡೆದುಕೊಳ್ಳುತ್ತಿದ್ದಳು.

ಹಾಗೆಯೇ ತನ್ನ ಸುದ್ದಿಯನ್ನು ಅಮೀನಾಳ ಮೂಲಕ ಕಳುಹಿಸುತ್ತಿದ್ದಳು. ಅಮೀನಾಳಿಗೆ ಜೊತೆಯಾಗಿ ಅವಳ ತಂಗಿ ಹಾಗೂ ಸ್ನೇಹಿತೆ ಕೊಟ್ರಮ್ಮ ಸಹ ಇರುತ್ತಿದ್ದರು. ಉಚ್ಚೆಂಗಮ್ಮ ಮನೆಯಲ್ಲಿ ಇದ್ದ ಸಮಯದಲ್ಲಿ ಪ್ರತಿ ದಿನ ತಮ್ಮ ಹೊಲದ ಕೆಲಸಕ್ಕೆ ಹೋಗುತ್ತಿದ್ದಳು. ಹೊಳಗುಂದಿಯ 'ಭೀಮಸಂಘ'ದ ವಾಗೀಶ, ಬಸವರಾಜ ಹಾಗೂ ಮತ್ತಿತರರು ಉಚ್ಚೆಂಗಮ್ಮ ಯಾವ ಕಡೆ ಹೊಲದ ಕೆಲಸಕ್ಕೆ ಹೋಗಿದ್ದಾಳೆ ಎಂದು ತಿಳಿದು ಅದೇ ಕಡೆಗೆ ದನಗಳನ್ನು ಮೇಯಿಸಲು ಹೊಡೆದುಕೊಂಡು ಹೋಗಿ ಮಾಹಿತಿ ಸಂಗ್ರಹಿಸುತ್ತಿದ್ದರು.

> "ಗ್ರಾಮೀಣ ಪ್ರದೇಶದಲ್ಲಿ ಬಾಲ್ಯ ವಿವಾಹ ಜಾಸ್ತಿಯಾಗಿದೆ. ಕಾರಣ ಶಿಕ್ಷಣ ಮತ್ತು ಮಾಹಿತಿ ಕೊರತೆ. ಆದರೆ ಉಚ್ಚೆಂಗಮ್ಮಳ ಧೈರ್ಯ ಮೆಚ್ಚುವಂತಹದ್ದು. ಅವಳು ಬಾಲ್ಯವಿವಾಹ ತಡೆಯಲು ತೋರಿದ ಆಸಕ್ತಿ ಹೆಚ್ಚಿನ ಮಕ್ಕಳು ಬೆಳೆಸಿಕೊಳ್ಳಬೇಕು".
>
> **- ಶ್ರೀ. ಎ.ಜಿ ವೀರಣ್ಣಗೌಡ, ಮಾಜಿ ಗ್ರಾಮ ಪಂಚಾಯತ್ ಅಧ್ಯಕ್ಷರು ಹಾಗೂ ಮಕ್ಕಳ ಮಿತ್ರ ಹೊಳಗುಂದಿ, ಬಳ್ಳಾರಿ ಜಿಲ್ಲೆ.**

ಉಚ್ಚೆಂಗಮ್ಮ ಹೊಲದಿಂದ ಕೆಲಸ ಮುಗಿಸಿ ತಿರುಗಿ ಬರುವಾಗ 'ಭೀಮಸಂಘ'ದ ಕೆಲವು ಮಕ್ಕಳು ಯಾವಾಗಲೂ ಆಟ ಆಡುತ್ತಾ ಉಚ್ಚೆಂಗಮ್ಮಳ ಯೋಗಕ್ಷೇಮ, ಸುದ್ದಿ ತಿಳಿದು ಸಿ.ಡಬ್ಲ್ಯೂ.ಸಿ. ತರಬೇತಿ ಕೇಂದ್ರಕ್ಕೆ ಬಂದು ನಾವು ಉಚ್ಚೆಂಗಮ್ಮಳಿಗೆ ಸಿಕ್ಕಿದ್ದೇವೆ. ತಿರುಗಿ ನಾಳೆ ಸಿಗುತ್ತಾಳೆ, ಅವಳಿಗೆ ಏನಾದರೂ ಹೇಳಬೇಕಾ? ಎಂದು ಸಂಸ್ಥೆ ಮತ್ತು 'ಭೀಮಸಂಘ'ದೊಂದಿಗೆ ಚರ್ಚಿಸಿ, ವಿಷಯುವನ್ನು ಮರುದಿನ ಉಚ್ಚೆಂಗಮ್ಮಳಿಗೆ ಸುದ್ದಿ ತಲುಪಿಸುತ್ತಿದ್ದರು. ಉಚ್ಚೆಂಗಮ್ಮಳ ಸ್ನೇಹಿತೆಯಾದ ಜ್ಯೋತಿ, ಮಂಜುಳ ಎನ್ನುವವರಿಬ್ಬರು ಉಚ್ಚೆಂಗಮ್ಮಳ ಮನೆಗೆ ಹೋಗಿ ಉಚ್ಚೆಂಗಮ್ಮಳ ಯೋಗಕ್ಷೇಮದ ಬಗ್ಗೆ ವಿಷಯ ಸಂಗ್ರಹಿಸಿ, ಮಾನಸಿಕ ಬೆಂಬಲ ನೀಡುತ್ತಿದ್ದರು. ಈ ಮಧ್ಯೆ ಉಚ್ಚೆಂಗಮ್ಮಳನ್ನು ದೈಹಿಕವಾಗಿ ಅಸ್ವಸ್ಥಳನ್ನಾಗಿ ಕಂಡ ಸ್ನೇಹಿತೆ ಜ್ಯೋತಿ, ಸ್ಥಳೀಯ ಆರೋಗ್ಯ ಸಹಾಯಕಿಯನ್ನು ಕರೆದುಕೊಂಡು ಹೋಗಿ ಆರೋಗ್ಯ ತಪಾಸಣೆ ಮಾಡಿಸಿದಳು. ಈ ಎಲ್ಲಾ ಸಂಪರ್ಕ ಕೊಂಡಿಗಳಿಂದಾಗಿ ಉಚ್ಚೆಂಗಮ್ಮಳಿಗೆ ತನ್ನ ದೃಢ ನಿರ್ಧಾರ, ಹೋರಾಟ ಹಾಗೂ ಆಲೋಚನಾಮಟ್ಟ ಬೆಳೆಸಲು ದಾರಿ ಆಗುತ್ತಿತ್ತು.

ಸಂಸ್ಥೆ ಹಾಗೂ 'ಭೀಮಸಂಘ'ದ ಈ ರೀತಿಯ ನಿರಂತರ ಬೆಂಬಲದಿಂದ ಉಚೆಂಗಮ್ಮಳಿಗೆ ಆತ್ಮಸ್ಥೈರ್ಯ ಹೆಚ್ಚುತ್ತಿತ್ತು ಹಾಗೂ ಹೋರಾಟದ ನಿಲುವು ಗಟ್ಟಿಯಾಗಿ ಬೆಳೆಯುತ್ತಾ ಹೋಯಿತು.

"ಬಾಲ್ಯ ವಿವಾಹ ವಿರೋಧಿ ಆಂದೋಲನ ಕಾರ್ಯಕ್ರಮದಲ್ಲಿ ನಾನು ಸಕ್ರೀಯವಾಗಿ ಭಾಗವಹಿಸಿ ಊರಿನ ಜನರಿಗೆ ಅದರ ಬಗ್ಗೆ ಅರಿವು ಮೂಡಿಸಲು ಸಂಘದ ಜೊತೆ ಪ್ರಯತ್ನ ಮಾಡಿದ್ದೇನೆ. ಇಂತಹ ಕಾರ್ಯ ಕ್ರಮಗಳು ಎಲ್ಲಾ ಗಾಮ ಪಂಚಾಯತ್‌ನಲ್ಲಿ ನಡೆಯಬೇಕು".

**- ಕು.ಪಾರ್ವತಿ, ಭೀಮಸಂಘ - ಮಾಜಿ ರಾಜ್ಯಸಮಿತಿ ಕಾರ್ಯದರ್ಶಿ, ಉಪ್ಪುಂದ, ಕುಂದಾಪುರ, 2002**

ಉಚ್ಚೆಂಗಮ್ಮಳ ಗೃಹಬಂಧನದ ವಿಷಯವನ್ನು ತಿಳಿದ 'ಮಕ್ಕಳ ಮಿತ್ರ' ಶ್ರೀ. ಎ.ಜಿ.ವೀರಣ್ಣಗೌಡರು ಹಾಗೂ ಗ್ರಾಮ ಪಂಚಾಯತ್ ಅಧ್ಯಕ್ಷೆ ಶ್ರೀಮತಿ. ತಿಪ್ಪಮ್ಮ, ಅವಳು ಪುನ: ಭಾಗವಹಿಸುವಂತಾಗಲು ಸಮುದಾಯದ ಮುಖಂಡರನ್ನು ಕರೆದು ಸಂಸ್ಥೆ, 'ಭೀಮಸಂಘ' ಹಾಗೂ ಉಚ್ಚೆಂಗಮ್ಮಳ ಬಗ್ಗೆ ಮಾಹಿತಿ ನೀಡಿ ತಿಳಿ ಹೇಳಿದರು. ಹಡಗಲಿ ಶಾಸಕರು, ತಹಶೀಲ್ದಾರರು ಕೂಡ ಉಚ್ಚೆಂಗಮ್ಮಳ ಮನೆಗೆ ಭೇಟಿ ನೀಡಿ ಬೆಂಬಲ ವ್ಯಕ್ತಪಡಿಸಿದರು. ಉಚ್ಚೆಂಗಮ್ಮಳ ಎಲ್ಲಾ ಚಟುವಟಿಕೆಗಳು ಸ್ಥಗಿತಗೊಂಡಾಗ 'ಭೀಮಸಂಘ' ಸದಸ್ಯರು, 'ಮಕ್ಕಳ ಮಿತ್ರ' ಹಾಗೂ ಪಂಚಾಯತ್ ಅಧ್ಯಕ್ಷೆ, ದೈವಸ್ಥರ ಸಮ್ಮುಖದಲ್ಲಿ ಉಚ್ಚೆಂಗಮ್ಮ ಪುನ: ಸ್ವತಂತ್ರವಾಗಿ ಭಾಗವಹಿಸಲು ಅವಕಾಶ ಕಲ್ಪಿಸಿಕೊಡಬೇಕೆಂದು ಚರ್ಚಿಸಿ, ಅವಳ ಪೋಷಕರ ಮನವೊಲಿಸಿ, 47 ದಿನ ಮನೆಯಲ್ಲೆ ಇದ್ದ ಉಚ್ಚೆಂಗಮ್ಮಳನ್ನು ಹೊರಬರುವಂತೆ ಮಾಡಿದರು.

"ಮಕ್ಕಳಿಗೆ ಭವಿಷ್ಯ ಅತಿ ಮುಖ್ಯ. ನಮ್ಮ ತಂಗಿ-ತಮ್ಮಂದಿರ ಬಾಳು ಬೆಳಕಾಗಬೇಕಾದರೆ ಬಾಲ್ಯ ವಿವಾಹ ನಿಲ್ಲಿಸಬೇಕು".

**- ಶ್ರೀಮತಿ, ತಿಪ್ಪಮ್ಮ ಮಾಜಿ ಪಂಚಾಯತ್ ಅಧ್ಯಕ್ಷರು -**

**ಹೊಳಗುಂದಿ, ಬಳ್ಳಾರಿ ಜಿಲ್ಲೆ,2002**

ಮಗಳ ಧೈರ್ಯ, ಸತ್ಯದ ಬಗ್ಗೆ ಅರಿವು ಮೂಡಿದ ಉಚ್ಚಂಗಮ್ಮಳ ತಂದೆ ಸಿ.ಡಬ್ಲ್ಯೂ.ಸಿ. ತರಬೇತಿ ಕೇಂದ್ರಕ್ಕೆ ಭೇಟಿ ನೀಡಿ ಹೀಗೆಂದರು; 'ನನ್ನ ಮಗಳ ಭವಿಷ್ಯ ಚೆನ್ನಾಗಿರಬೇಕು. **'ಬಾಲ್ಯವಿವಾಹ'**ದ ತೊಂದರೆಗಳ ಬಗ್ಗೆ ನನಗೆ ಮಾಹಿತಿ ಇರಲಿಲ್ಲ. ನನ್ನ ಮಗಳಿಂದ ಮಾಹಿತಿ ಪಡೆದಂತಾಯಿತು. ನನಗೆ ಈಗ ತುಂಬಾ ಸಂತೋಷವಾಗಿದೆ. ಮಗಳ ಭಾಗವಹಿಸುವಿಕೆಗೆ ಇನ್ನೆಂದೂ ಅಡ್ಡಿ ಬರುವುದಿಲ್ಲ' ಎಂದು ಭರವಸೆ ನೀಡಿದರು.

ಬಾಲ್ಯವಿವಾಹ ವಿರುದ್ಧ ಬಾಲಕಿಯ ಹೋರಾಟ

ಉಚ್ಚಂಗಮ್ಮಳಿಗೆ 'ನಮ್ಮ ಭೂಮಿ' ಬೆಂಬಲ

ವಿಜಯ ಕರ್ನಾಟಕ ಜೂನ್ 7-2002

# ಉಬ್ಬೆಂಗಮ್ಮಳ ದಿಟ್ಟ ನಿರ್ಧಾರ

ನಾನು 18 ವರ್ಷ ತುಂಬುವತನಕ ಮದುವೆಯಾಗುವುದಿಲ್ಲ. ನಮ್ಮ ಸಮುದಾಯದಲ್ಲಿ ಅನೇಕ **'ಬಾಲ್ಯ ವಿವಾಹ'**ಗಳು ನಡೆದಿವೆ. ಇದನ್ನು ತಡೆಯಬೇಕೆಂದು ನನ್ನ ಇಚ್ಛೆಯಾಗಿತ್ತು. ಈ ಸಂದರ್ಭ ಬಂದೇ ಬಿಟ್ಟಿತು.

ನನ್ನ ಮನೆಯಲ್ಲಿ ನನ್ನ ಮದುವೆಯ ಬಗ್ಗೆ ಮಾತು ನಡೆಯುತ್ತಿರುವಾಗ ನನಗೆ ಅದರ ವಿರುದ್ಧ ಹೋರಾಡುವ ಶಕ್ತಿ ಸಿಕ್ಕಿತು. ನನ್ನ ಹೋರಾಟದಲ್ಲಿ ಗೆಲುವು ಸಾಧಿಸಲು ಮತ್ತು ಬೇರೆ ಮಕ್ಕಳಿಗಿಂತ ಭಿನ್ನ ಎಂದು ತೋರಿಸಲು ಮುಖ್ಯ ಕಾರಣವೆಂದರೆ ನಾನು ತೆಗೆದುಕೊಂಡ ದಿಟ್ಟ ನಿರ್ಧಾರ. ಯಾವುದೇ ರೀತಿಯ ಒತ್ತಡ ಬಂದರೂ ನಾನು ನನ್ನ ನಿರ್ಧಾರ ಬದಲಾಯಿಸಲಿಲ್ಲ. ಈ ನಿರ್ಧಾರಕ್ಕೆ ಪೋಲೀಸರ ಸಹಾಯ ಕೇಳಿದಾಗ ನನ್ನನ್ನು ಪ್ರೋತ್ಸಾಹಿಸಿ ನೀಡಿದ ಬೆಂಬಲ ತುಂಬಾ ಸಹಾಯವಾಯಿತು.

ಪೋಲೀಸರು ನನ್ನನ್ನು ಪ್ರಶ್ನಿಸಿದಾಗ ನಾನು ಅವರಿಗೆ ಕೊಟ್ಟ ಉತ್ತರ ಇಷ್ಟೇ; ನಾನು ದುಡಿಯುವ ಮಕ್ಕಳ ಸಂಘಟನೆಯ ರಾಜ್ಯ ಅಧ್ಯಕ್ಷೆಯಾಗಿ ಮಾತನಾಡುತ್ತಿಲ್ಲ. ಬದಲಾಗಿ ನನ್ನಂತ ಎಲ್ಲ ಅಪ್ರಾಪ್ತ ಹೆಣ್ಣುಮಕ್ಕಳ ಪರವಾಗಿ ಮಾತನಾಡುತ್ತಿದ್ದೇನೆ. ನನಗೆ ರಕ್ಷಣೆ ಸಿಗದಿದ್ದಲ್ಲಿ ಅನೇಕ ಹೆಣ್ಣುಮಕ್ಕಳಿಗೆ ಅನ್ಯಾಯವಾಗುವುದರಲ್ಲಿ ಸಂಶಯವೇ ಇಲ್ಲ. ನನಗೆ ರಕ್ಷಣೆ ಸಿಗದಿದ್ದಲ್ಲಿ ನನ್ನ ಸಂಘದ ಸದಸ್ಯರು ನಿಮ್ಮನ್ನು ಪ್ರಶ್ನಿಸುತ್ತಾರೆ ಎಂದು ಹೇಳಿದೆ. ತಕ್ಷಣ ಪೋಲೀಸರು ಅಗತ್ಯ ಕ್ರಮ ತೆಗೆದುಕೊಂಡರು. ಇಂತಹ ನಿರ್ಧಾರಗಳನ್ನು ತೆಗೆದುಕೊಳ್ಳುವಾಗ ತಂದೆ ತಾಯಿಯ ಮತ್ತು ಸಮುದಾಯದ ಸಹಕಾರ ಅತಿ ಅಗತ್ಯ. ಅದು ಸಿಗದಿದ್ದಲ್ಲಿ ಬೇರೆಯವರ ಸಹಾಯ ಪಡೆದುಕೊಳ್ಳುವುದು ಅವಶ್ಯಕ.

ನನಗೆ ಸಂಘಕ್ಕೆ ಸೇರಿದ ನಂತರ ಬಾಲ್ಯ ವಿವಾಹದ ಬಗ್ಗೆ ಮಾಹಿತಿ ಸಿಕ್ಕಿತು. ಅದೇ ರೀತಿ **'ಬಾಲ್ಯ ವಿವಾಹ'**ದ ಕುರಿತು ತಂದೆ ತಾಯಿ ಮತ್ತು ಸಮುದಾಯಕ್ಕೆ ಮಾಹಿತಿ ಸಿಗಬೇಕು. ಹೆಚ್ಚಿನ ಮಕ್ಕಳು ಸಂಘಟಿತರಾಗಬೇಕು. ಸಂಘಟನೆಯಲ್ಲಿ ವಿಷಯ, ಮಾಹಿತಿ ಪಡೆದು ಬೆಳೆಯಲು ಸಹಾಯವಾಗುತ್ತದೆ. ನಮ್ಮ ಹಕ್ಕನ್ನು ಪಡೆಯಲು ಅದಕ್ಕಾಗಿ ಹೋರಾಡಲು ಸಂಘದ ಮೂಲಕ ಸಾಧ್ಯವಾಗುತ್ತದೆ.

'ಭೀಮಸಂಘ' ಮತ್ತು 'ನಮ್ಮಸಭಾ' ಸದಸ್ಯರು **'ಬಾಲ್ಯ ವಿವಾಹ'**ದ ವಿರುದ್ಧ ನನ್ನ ಹಳ್ಳಿಯಲ್ಲಿ ಆಂದೋಲನ ನಡೆಸಿ ಹಳ್ಳಿಯ ಪ್ರತಿಯೊಂದು ಕೇರಿ ಕೇರಿಗಳಿಗೆ ಭೇಟಿ ನೀಡಿ **'ಬಾಲ್ಯ ವಿವಾಹ'**ದ ಅಪಾಯಗಳ ಕುರಿತು ಅರಿವು ಮೂಡಿಸಿದ್ದಾರೆ. ಆಂದೋಲನ ಕಾರ್ಯಕ್ರಮದಲ್ಲಿ ಶಾಸಕರು, ಪಂಚಾಯತ್ ಅಧ್ಯಕ್ಷರು, ಸದಸ್ಯರು, 'ಮಕ್ಕಳ ಮಿತ್ರರು', ಸಿ.ಡಬ್ಲ್ಯೂ.ಸಿ. ಪ್ರತಿನಿಧಿಗಳು ಮತ್ತು ಊರಿನ ಜನರು ಭಾಗವಹಿಸಿದ್ದರು. 'ಬಾಲ್ಯ ವಿವಾಹ'ದ ದುಷ್ಪರಿಣಾಮಗಳ ಕುರಿತು ತಿಳಿದ ನನ್ನ ತಂದೆ ತಾಯಿ ನನ್ನ ನಿರ್ಧಾರಕ್ಕೆ ಪ್ರೋತ್ಸಾಹಿಸಿದರು. ಅವರ ಪ್ರೋತ್ಸಾಹದಿಂದ ಈಗ ನಾನು 'ಭೀಮಸಂಘ'ದ ಹೊಲಿಗೆ ತರಬೇತಿ ಕೇಂದ್ರಕ್ಕೆ ಹೋಗುತ್ತಿದ್ದೇನೆ.

ಪ್ರತಿಯೊಂದು ಹೆಣ್ಣು ಮಕ್ಕಳಿಗೆ ನಾನು ನೀಡುವ ಸಲಹೆಯೇನೆಂದರೆ, **'ಬಾಲ್ಯ ವಿವಾಹ'** ತಡೆಯಲು ನಿಮ್ಮ ದೃಢ ನಿರ್ಧಾರ ಮತ್ತು ಆ ಗುರಿ ಸಾಧಿಸಲು ಛಲ ನಿಮ್ಮಲ್ಲಿ ಬೆಳೆಸಿಕೊಳ್ಳಿ. ನಾನೇ ಒಂದು ಮಗು ನನಗೊಂದು ಮಗು ಬೇಕೇ ಎಂದು ಆಲೋಚಿಸಿ! **'ಬಾಲ್ಯ ವಿವಾಹ'** ನಿರ್ಮೂಲನೆಗೆ ಸರಕಾರ, ಕಾನೂನು ಸಹಕರಿಸಬೇಕು. ಆಗ ಗ್ರಾಮೀಣ ಪ್ರದೇಶಗಳಲ್ಲಿ ನಡೆಯುವ ಅನೇಕ **'ಬಾಲ್ಯ ವಿವಾಹ'** ಗಳನ್ನು ತಡೆಗಟ್ಟಬಹುದು.

***ಸಂದರ್ಶನ : ಉಚ್ಚಿಂಗಮ್ಮಳೊಂದಿಗೆ ಜೋಸೆಫ್ ಡಿ'ಸೋಜ***
***(ಭೀಮ ಮಿಡಿತ[6] ಆಗಸ್ಟ್-2002).***

6. 'ಭೀಮ ಮಿಡಿತ', ಮಕ್ಕಳಿಗಾಗಿ ಸಿ.ಡಬ್ಲ್ಯೂ.ಸಿ ಸಂಸ್ಥೆ ಹೊರತರುವ ನಿರ್ದಿಷ್ಟ ವಿಷಯವನ್ನೊಳಗೊಂಡ ಪತ್ರಿಕೆ.

# ಹೋರಾಟ ಮುಂದುವರಿಸಿದ ಧೀರರು....

ಹೀಗೆ ಒಂದು ಹಂತದಲ್ಲಿ ಉಚ್ಚೆಂಗಮ್ಮಳ ವೈಯಕ್ತಿಕ ಹೋರಾಟ ಜಯ ಕಂಡರೂ, ಅವಳ ನೇತೃತ್ವದೊಂದಿಗಿನ 'ಭೀಮಸಂಘ'ದ 'ಬಾಲ್ಯ ವಿವಾಹ' ಪದ್ಧತಿ ವಿರುದ್ಧ ಹೋರಾಟ ಮುಂದುವರೆದಿದೆ.

"ನಾವು ಉಚ್ಚೆಂಗಮ್ಮಳ ತರಹ ದಿಟ್ಟ ನಿರ್ಧಾರ ಮಾಡುತ್ತೇವೆ. ಚಿಕ್ಕ ವಯಸ್ಸಿನಲ್ಲಿ ಮದುವೆಯಾಗುವುದಿಲ್ಲ. ನಾವು ಮನೆ ಮನೆಗೆ ಹೋಗಿ ಬಾಲ್ಯ ವಿವಾಹದಿಂದಾಗುವ ತೊಂದರೆಯನ್ನು ತಿಳಿಸಿದ್ದು ನಮಗೆ ಹೆಮ್ಮೆ ಮತ್ತು ಧೈರ್ಯ ಬಂದಂತಾಗಿದೆ."

**- ಭೀಮಸಂಘದ ಸದಸ್ಯರು, ಹೊಳಗುಂದಿ-ಬಾವಿಹಳ್ಳಿ, ಬಳ್ಳಾರಿ ಜಿಲ್ಲೆ.**

ಉಚ್ಚೆಂಗಮ್ಮಳ ಈ ಹೋರಾಟದಿಂದ ಹಾಗೂ ಇಡೀ ಪಂಚಾಯತ್‌ನ ಶಾಲೆಗಳಲ್ಲಿ, ವಿಸ್ತರಣಾ ಶಾಲೆಗಳಲ್ಲಿ, ಸಮುದಾಯದಲ್ಲಿ 'ಭೀಮಸಂಘ' ಹಾಗೂ ಸಂಸ್ಥೆಯು ನಡೆಸುವ ನಿರಂತರ ಚರ್ಚೆ ಮತ್ತು ಮಾಹಿತಿ ಸಭೆಗಳಿಂದ ಇತರ ಮಕ್ಕಳಿಗೂ ಪ್ರೇರೇಪಣೆ ಸಿಕ್ಕಿದಂತಾಗಿದೆ.

ಶಿಲ್ಪ ಎನ್ನುವ 15 ವರ್ಷದ ಬಾಲಕಿಯು ತನಗೆ ನಡೆಯುವ 'ಬಾಲ್ಯ ವಿವಾಹ'ವನ್ನು ತಪ್ಪಿಸಲು ಸಾಧ್ಯವಾಯಿತು. ತನ್ನ ಹೆತ್ತವರು ಹುಡುಗ ನೋಡಿ ಮದುವೆ ನಿಶ್ಚಯಿಸುತ್ತಿದ್ದುದನ್ನು ಕಂಡು, ನನಗೆ ಈ ಮದುವೆ ಇಷ್ಟವಿಲ್ಲ ಎಂದು 'ಮಕ್ಕಳ ಮಿತ್ರ'ರಾದ ಶ್ರೀ.ಎ.ಜಿ.ವೀರಣ್ಣ ಗೌಡರಲ್ಲಿ ಕೋರಿಕೊಂಡಳು. ವಿಷಯ ತಿಳಿದ ಅವರು ಅವಳ ತಂದೆಯೊಂದಿಗೆ ಇದರ ಬಗ್ಗೆ ಚರ್ಚಿಸಿದರು. ಆಗ ಈಗಾಗಲೇ ನಿರ್ಮಾಣ ಆಗಿದ್ದ 'ಬಾಲ್ಯ ವಿವಾಹ' ಒಳ್ಳೆಯದಲ್ಲ ಎನ್ನುವ ವಾತಾವರಣವನ್ನು ಗ್ರಹಿಸಿ, ತಮ್ಮ ಮಗಳ ಮದುವೆ ಕೂಡಲೆ ನಿಲ್ಲಿಸಿದರು.

ಅದೇ ರೀತಿ ಹೊಳಗುಂದಿಯ ಬಾವಿಹಳ್ಳಿ ಗ್ರಾಮದ ಸರಕಾರಿ ಪ್ರಾಥಮಿಕ ಶಾಲೆಯ 5ನೇ ತರಗತಿಯಲ್ಲಿ ಓದುತ್ತಿರುವ ವೇದಾಕ್ಷಿಯ ಮದುವೆ ಮಾಡುವ

ವಿಷಯವನ್ನು ಅವಳ ಅಕ್ಕ ಕಸ್ತೂರಿ 'ಭೀಮಸಂಘ'ದ ವಾರದ ಸಭೆಯಲ್ಲಿ ಹಂಚಿಕೊಂಡಳು. ಈ ಮದುವೆ 'ಬಾಲ್ಯ ವಿವಾಹ' ಆದ ಕಾರಣ ಈ ವಿಷಯವನ್ನು ಗಂಭೀರವಾಗಿ ತೆಗೆದುಕೊಂಡು, 'ಭೀಮಸಂಘ' ಕೂಡಲೇ ಸಿ.ಡಬ್ಲ್ಯೂ.ಸಿ. ಸಂಸ್ಥೆ ಹಾಗೂ 'ಭೀಮಸಂಘ' ರಾಜ್ಯಸಮಿತಿ ಅಧ್ಯಕ್ಷೆ ಉಚ್ಚೆಂಗಮ್ಮಳಿಗೆ ತಿಳಿಸಿದರು. 'ಭೀಮಸಂಘ' ಗ್ರಾಮ ಸಮಿತಿ 'ಮಕ್ಕಳ ಪಂಚಾಯತ್'ಗೆ ತಿಳಿಸಿ 'ಮಕ್ಕಳ ಪಂಚಾಯತ್' ಸಭೆಯಲ್ಲಿ ವೇದಾಕ್ಷಿಯ ಮದುವೆಯನ್ನು ನಿಲ್ಲಿಸುವ ತೀರ್ಮಾನ ಮಾಡಿ, 'ಮಕ್ಕಳ ಮಿತ್ರ'ರಾದ ಶ್ರೀ ಎ.ಜಿ.ವೀರಣ್ಣ ಗೌಡರನ್ನು ಭೇಟಿ ಮಾಡಿದರು.

ಶ್ರೀ.ಎ.ಜಿ.ವೀರಣ್ಣಗೌಡರು ಒಂದು ತಂಡ ರಚನೆ ಮಾಡಿ ಗದಗದ (ಗಂಡಿನ ಕಡೆಯವರ ಮನೆಗೆ) ಬೆಳದಡಿ ಎಂಬಲ್ಲಿಗೆ ಹೋಗಿ ವೇದಾಕ್ಷಿಯ ಮದುವೆ ನಿಲ್ಲಿಸುವಂತೆ ಮನವಿ ಮಾಡಿದರು. ಆದರೆ ಅದು ಪರಿಣಾಮ ಬೀರುತ್ತದೆ ಎಂದು ಖಾತ್ರಿ ಇರಲಿಲ್ಲ. ಗಂಡಿನ ಕಡೆಯವರು ವೇದಾಕ್ಷಿಯ ಮನೆಗೆ ಬಂದಾಗ 'ಭೀಮಸಂಘ' ಹಾಗೂ 'ಮಕ್ಕಳ ಪಂಚಾಯತ್' ಮತ್ತು ಸಂಸ್ಥೆಯ ಪ್ರತಿನಿಧಿಗಳು ವೇದಾಕ್ಷಿಯ ಮನೆಗೆ ಹೋಗಿ ಅವರೆಲ್ಲರ ಮನವೊಲಿಸುವ ಪ್ರಯತ್ನ ಮಾಡಿದರು. ಆದರೆ ಬಂದಂತ ಬೀಗರು ಈ ಮದುವೆ ಮಾಡಿಯೇ ತೀರುವ ಪಣತೊಟ್ಟರು ಮದುವೆ ಪತ್ರಿಕೆ ಮುದ್ರಿಸಿದ ಬಗ್ಗೆ ಕೂಡ ತಿಳಿಸಿದರು.

'ಮಕ್ಕಳ ಪಂಚಾಯತ್' ಮತ್ತು 'ಭೀಮಸಂಘ' 'ಮಕ್ಕಳ ಮಿತ್ರ'ರನ್ನು ಮತ್ತೊಮ್ಮೆ ಭೇಟಿ ಮಾಡಿದರು. 'ಮಕ್ಕಳ ಮಿತ್ರ' ತಮ್ಮ ತಂಡದ ಜೊತೆ ಬೀಗರ ಮನೆಗೆ ಮತ್ತೊಮ್ಮೆ ಹೋಗಿ ಅವರ ಮನವೊಲಿಸುವಲ್ಲಿ ಯಶಸ್ವಿಯಾದರು. ಈ ಮದುವೆ ನಿಲ್ಲಿಸುವಲ್ಲಿ 'ಮಕ್ಕಳ ಮಿತ್ರ' ಶ್ರೀ.ಎ.ಜಿ.ವೀರಣ್ಣಗೌಡರ ಪಾತ್ರ ಹಿರಿದು. 'ಮಕ್ಕಳ ಪಂಚಾಯತ್' ಮತ್ತು ಗ್ರಾಮ ಸಮಿತಿ ಒಟ್ಟಿಗೆ ಸೇರಿ ಶಾಸಕರಿಗೆ, ಗದಗ-ಬಳ್ಳಾರಿ ಜಿಲ್ಲಾ ಆಯುಕ್ತರಿಗೆ, ತಹಶೀಲ್ದಾರ್, ಪೋಲೀಸ್ ಇಲಾಖೆಗೆ, 'ಮಕ್ಕಳ ಮಿತ್ರ' ಹಾಗೂ ಹಳ್ಳಿಯಲ್ಲಿರುವ 16 ಸಂಘಗಳಿಗೆ ಪತ್ರವನ್ನು ಕಳುಹಿಸಿದರು. ವೇದಾಕ್ಷಿಯ ಲಗ್ನ ತನ್ನ ಅಕ್ಕನ ಮದುವೆಯೊಂದಿಗೆ ಇದ್ದಿದ್ದು ಒಂದು ವೇಳೆ ವೇದಾಕ್ಷಿಯ ಅಕ್ಕನ ಮದುವೆಗೆ ಹೋದಾಗ ಅಲ್ಲಿಯೂ ವೇದಾಕ್ಷಿಗೆ ಮದುವೆ ಮಾಡಬಹುದು ಎಂಬ ಅನುಮಾನ ಎಲ್ಲರಲ್ಲಿಯೂ ಮೂಡಿತು.

ಆದುದರಿಂದ ವೇದಾಕ್ಷಿ ನಮ್ಮ ಸ್ವಾಧೀನವಿರಲಿ ಎಂದು ಪೊಲೀಸರು ಆವಳ ಪೋಷಕರಿಗೆ ಹೇಳಿ 'ಮಕ್ಕಳ ಮಿತ್ರ'ರಾದ ಶ್ರೀ.ಎ.ಜಿ.ವೀರಣ್ಣಗೌಡರ ಬಳಿ ವೇದಾಕ್ಷಿಯನ್ನು ಕರೆದುಕೊಂಡು ಹೋದರು.

> "ಈ ಘಟನೆ ಹೊಳಗುಂದಿ ಗ್ರಾಮಕ್ಕೆ ಮಾತ್ರವಲ್ಲ, ನಮ್ಮ ಜಿಲ್ಲೆಗೇನೇ ಒಂದು ಮಾದರಿಯಾಗಬೇಕು. ಪ್ರಚಾರ ಮುಖ್ಯವಲ್ಲ, ಇದರಿಂದ ಜನರಲ್ಲಿ ಅರಿವು ಮೂಡಬೇಕು".
>
> **- ಶ್ರೀ.ಎಸ್.ವಿ.ಬಾದವಾಡಗಿ, ಪೋಲೀಸ್ ವೃತ್ತ ನಿರೀಕ್ಷಕರು**
> **ಹೂವಿನಹಡಗಲಿ, ಬಳ್ಳಾರಿ ಜಿಲ್ಲೆ, 2002**

'ಭೀಮಸಂಘ' ಈ ಇಡೀ ಪ್ರಕ್ರಿಯೆ ಮಾಡುತ್ತಿರುವುದರಿಂದ 2 ದಿನದ ಮಟ್ಟಿಗೆ ವೇದಾಕ್ಷಿಯನ್ನು 'ಭೀಮಸಂಘ'ದ ರಕ್ಷಣೆಗೆ ಒಪ್ಪಿಸಿ 'ಭೀಮಸಂಘ'ದ ರಾಜ್ಯಾಧ್ಯಕ್ಷೆ ಉಚ್ಚೆಂಗಮ್ಮಳಿಗೆ ಜವಾಬ್ದಾರಿ ವಹಿಸಲು ಪೋಲೀಸಿನವರಿಗೆ ಶ್ರೀ.ಎ.ಜಿ. ವೀರಣ್ಣ ಗೌಡರು ತಿಳಿಸಿದರು. ಅಂತೆಯೇ ವೇದಾಕ್ಷಿ 2 ದಿನ ಹೊಳಗುಂದಿ ತರಬೇತಿ ಕೇಂದ್ರದಲ್ಲಿ ಆಶ್ರಯ ಪಡೆದಳು. ಈಗ ವೇದಾಕ್ಷಿ ನಿಶ್ಚಿಂತೆಯಿಂದ ಮರಳಿ ಶಾಲೆಗೆ ಹೋಗುತ್ತಿದ್ದಾಳೆ. ಸಮುದಾಯ, ಪೋಲೀಸ್ ಇಲಾಖೆ, ಮತ್ತು ಸಂಘ-ಸಂಸ್ಥೆಯ ಸಹಾಯದಿಂದ ಈ ಮದುವೆ ನಿಲ್ಲಿಸಲು ಸಾಧ್ಯವಾಯಿತು.



ಬಾಲ್ಯವಿವಾಹದ ವಿರುದ್ಧ ಹೋರಾಡುತ್ತಿರುವ ಬಾಲೆ

'ಹದಿನೆಂಟ್ವರ್ಷ ತುಂಬೋವರ್ಗೂ ಮದುವೆ ಬ್ಯಾಡ್ರಿ'

**ಉದಯವಾಣಿ, ಜೂನ್ 5, 2002**

# ಬಾಲ್ಯ ವಿವಾಹ ತಡೆಯಲು ಹೆಚ್ಚಿನ ಪ್ರಯತ್ನಕ್ಕೆ ಸಜ್ಜಾದ ಸರ್ಕಾರ

‘ಬಾಲ್ಯ ವಿವಾಹ’ ತಡೆಯುವ ಉದ್ದೇಶದಿಂದ ಹಿಂದೂ ವಿವಾಹ ಕಾಯ್ದೆಯಲ್ಲಿ ತಿದ್ದುಪಡಿ ತರಲಾಗುವುದು ಮತ್ತು ವಿವಾಹಗಳ ನೋಂದಣಿಯನ್ನು ಕಡ್ಡಾಯಗೊಳಿಸಲಾಗುವುದು ಎಂದು **‘ಮಹಿಳಾ ಮತ್ತು ಮಕ್ಕಳ ಕಲ್ಯಾಣ’ ಸಚಿವೆ ಶ್ರೀಮತಿ. ಮೋಟಮ್ಮ** ನವರು ವಿಧಾನ ಪರಿಷತ್ತಿನಲ್ಲಿ ಪ್ರಕಟಿಸಿದ್ದಾರೆ.

ವಿವಾಹ ನೋಂದಣಿ ಸಂದರ್ಭದಲ್ಲಿ ವಿವಾಹ ಆಗಬಯಸುವ ವಧು-ವರನ ವಯಸ್ಸಿನ ಪ್ರಮಾಣ ಪತ್ರ ಹಾಗೂ ವರನಿಗೆ ಇದು ಎರಡನೇ ಮದುವೆ ಅಲ್ಲ ಎಂಬ ದೃಢೀಕರಣ ಪತ್ರ ಹಾಜರು ಪಡಿಸುವುದನ್ನು ಕಡ್ಡಾಯ ಮಾಡಲಾಗುವುದು. ಸಾಮೂಹಿಕ ವಿವಾಹ ಆಯೋಜಿಸುವವರು ಈ ಪ್ರಮಾನ ಪತ್ರಗಳನ್ನು ಒಂದು ವಾರ ಮುಂಚೆಯೇ ಸಂಬಂಧಿತ ಪೋಲೀಸ್ ಠಾಣೆಗಳಿಗೆ ಸಲ್ಲಿಸಬೇಕು. ಒಂದು ವೇಳೆ ‘ಬಾಲ್ಯ ವಿವಾಹ’ ನಡೆದರೆ ಮಕ್ಕಳ ಪೋಷಕರನ್ನೇ ಹೊಣೆಗಾರರನ್ನಾಗಿ ಮಾಡಲಾಗುವುದು ಎಂದು ಸಚಿವೆ ತಿಳಿಸಿದ್ದಾರೆ.

**- ಮಾರ್ಚ್ 05,2003**
**ವಿಧಾನಸಭೆಯಲ್ಲಿ ಕೊಟ್ಟ ಹೇಳಿಕೆ.**

**Govt. urged to take steps against child marriage**

The Hindu, June 6, 2002

- ಮಾರ್ಚ 05, 2003
ವಿಧಾನಸಭೆಯಲ್ಲಿ ಕೊಟ್ಟ ಹೇಳಿಕೆ.

**ಬಾಲ್ಯ ವಿವಾಹ ತಡೆಗೆ ಕಾಯ್ದೆಗೆ ತಿದ್ದುಪಡಿ: ಮೋಟಮ್ಮ**



ಉದಯವಾಣಿ, ಮಾರ್ಚ 6, 2003

## ಕಾನೂನು ಉಲ್ಲಂಘಿಸಿದರೆ ಶಿಕ್ಷೆ

ಕಾನೂನಿನ ಪ್ರಕಾರ 'ಬಾಲ್ಯ ವಿವಾಹ' ಒಂದು ಅಪರಾಧ.

**1929 'ಬಾಲ್ಯ ವಿವಾಹ ತಡೆ'** ಕಾಯಿದೆಯ ವಿಧಿಯನ್ವಯ ಯಾವುದೇ ಮತ ಧರ್ಮದಲ್ಲಿ **'ಬಾಲ್ಯ ವಿವಾಹ'** ನಡೆಸುವಂತಿಲ್ಲ. **'ಬಾಲ್ಯ ವಿವಾಹ'** ನಡೆಸಿದರೆ ಕಾನೂನು ಈ ಕೆಳಗಿನ ಕ್ರಮಗಳನ್ನು ತೆಗೆದುಕೊಳ್ಳುತ್ತದೆ.

21 ವರ್ಷದೊಳಗಿನ ಪುರುಷ ಅಪ್ರಾಪ್ತ ಬಾಲಕಿಯನ್ನು ಮದುವೆಯಾದರೆ ಆತನಿಗೆ 15 ದಿನದಿಂದ 1 ವರ್ಷ ಸೆರೆ ಮತ್ತು ರೂ.1,000ದಿಂದ ರೂ. 50,000ದವರೆಗೆ ದಂಡ ವಿಧಿಸುತ್ತದೆ. ಅದೇ ರೀತಿ **'ಬಾಲ್ಯ ವಿವಾಹ'** ನಡೆಸುವವರಿಗೆ ಮತ್ತು ಅದಕ್ಕೆ ಸಹಾಯ ಮಾಡುವವರಿಗೆ ಶಿಕ್ಷೆ ಕಾದಿದೆ.

ಸರಕಾರಿ ಹುದ್ದೆಯಲ್ಲಿರುವವರು, ಚುನಾಯಿತ ಪ್ರತಿನಿಧಿಗಳು 'ಬಾಲ್ಯ ವಿವಾಹ'ಕ್ಕೆ ಪ್ರೋತ್ಸಾಹ ನೀಡಿದರೆ ಅವರು ತಮ್ಮ ಹುದ್ದೆಯನ್ನು ಕಳೆದುಕೊಳ್ಳಬೇಕಾಗುತ್ತದೆ.

**'ಬಾಲ್ಯ ವಿವಾಹ'**ವನ್ನು ಪ್ರತ್ಯೇಕ ಮತ್ತು ಪರೋಕ್ಷವಾಗಿ ನಡೆಸಿಕೊಡುವ ಪ್ರತಿಯೊಬ್ಬರಿಗೂ - ಪೋಷಕರು, ರಕ್ಷಕರು, ಪುರೋಹಿತರು ಅಥವಾ ಇನ್ನಾವುದೇ ವ್ಯಕ್ತಿಗಳು ಇದಕ್ಕೆ ಸಹಕರಿಸುವ ಮತ್ತು ಇದರಲ್ಲಿ ಪಾಲ್ಗೊಳ್ಳುವ ಸಂಘ- ಸಂಸ್ಥೆಗಳಿಗೂ ಉಗ್ರ ಶಿಕ್ಷೆ ಕಾದಿದೆ.

## 'ಬಾಲ್ಯ ವಿವಾಹ' ತಡೆಯುವುದು ಹೇಗೆ:

**'ಬಾಲ್ಯ ವಿವಾಹ'** ನಡೆಯುವ ಕುರಿತು ನಿಮ್ಮ ಪಂಚಾಯತಿಗೆ, ತಹಶೀಲ್ದಾರರಿಗೆ ಅಥವಾ ಜಿಲ್ಲಾಧಿಕಾರಿಗೆ ತಿಳಿಸಿ ಮದುವೆಯನ್ನು ತಡೆಯಬಹುದು. ಹತ್ತಿರದ ಸಂಬಂಧಿಕರು, ಸ್ನೇಹಿತರು, ನಾಗರೀಕರು ಮತ್ತು ಅಕ್ಕಪಕ್ಕದವರು ಪೋಲೀಸ್

ಠಾಣೆಯಲ್ಲಿ 'ಬಾಲ್ಯ ವಿವಾಹ' ನಡೆಯುವ ಬಗ್ಗೆ ಮಾಹಿತಿ ನೀಡಿ ದೂರನ್ನು ದಾಖಲಿಸಬಹುದು.

'ಬಾಲ್ಯ ವಿವಾಹ' ನಡೆಯುವ ಬಗ್ಗೆ ನ್ಯಾಯಾಧೀಶರಿಗೆ ತಿಳಿಸಿದರೆ ಅವರು ಅದನ್ನು ತಡೆಯಲು ಕ್ರಮ ತೆಗೆದುಕೊಳ್ಳುತ್ತಾರೆ.

## ಬಾಲ್ಯ ವಿವಾಹದಿಂದ ಮಕ್ಕಳ ಆರೋಗ್ಯಕ್ಕೂ ಹಾನಿ

ಮದುವೆಯಾದ ಅಪ್ರಾಪ್ತ ಹುಡುಗಿಯರು ತೀವ್ರ ರಕ್ತಹೀನತೆಯಿಂದ ಮತ್ತು ಅಪೌಷ್ಠಿಕತೆಯಿಂದಲೂ ಬಳಲುತ್ತಾರೆ. ಗರ್ಭಧಾರಣೆಯಲ್ಲಿ ಮತ್ತು ಹೆರಿಗೆಯ ಸಂದರ್ಭದಲ್ಲಿ ಹಲವು ತೊಂದರೆಗಳಿಗೆ ಒಳಗಾಗುತ್ತಾರೆ.

ವಿಶ್ವಸಂಸ್ಥೆಯ ಅಧ್ಯಯನದ ಪ್ರಕಾರ 15 ವರ್ಷದ ಹುಡುಗಿಯರು ತಾಯಿಯಾಗುವಾಗ ಅವರಲ್ಲಿ ಶೇಕಡ 25ರಷ್ಟು ಜನ ಸಾವನ್ನಪ್ಪುತ್ತಾರೆ. 15ರಿಂದ 19 ವರ್ಷದ ಹುಡುಗಿಯರು ಅದರ ಎರಡು ಪಟ್ಟು ಜಾಸ್ತಿಯಾಗಿ ಸಾವನ್ನಪ್ಪುತ್ತಾರೆಂದು ವರದಿ ಹೇಳುತ್ತದೆ.

ಎಳೆಯ ವಯಸ್ಸಿನಲ್ಲಿ ಗರ್ಭಧಾರಣೆಯಾದ ಹುಡುಗಿಯ ಗರ್ಭಕೋಶ ಹಿಗ್ಗಿ ಅದರಿಂದ ಅನೇಕ ಸಮಸ್ಯೆಗಳು ಉಂಟಾಗಬಹುದು. ಪರಿಣಿತರ ಪ್ರಕಾರ ಶೇಕಡ 75ರಷ್ಟು ಜನ ಅಪ್ರಾಪ್ತ ಹುಡುಗಿಯರು ಕಡಿಮೆ ತೂಕವುಳ್ಳ ಮಗುವಿಗೆ ಜನ್ಮ ನೀಡುತ್ತಾರೆ. ಆ ಮಕ್ಕಳು ಬದುಕಿ ಉಳಿಯುವುದು ಕಷ್ಟ. ಚಿಕ್ಕ ವಯಸ್ಸಿನಲ್ಲಿ ಮಕ್ಕಳನ್ನು ಹೆತ್ತು ಲಾಲನೆ-ಪಾಲನೆ ಮಾಡಲು, ಮಕ್ಕಳಿಗೆ ಮಾಹಿತಿ ಮತ್ತು

ಸಾಮರ್ಥ್ಯ ಇರುವುದು ವಿರಳ. ಮಗುವಿಗೆ ಬೆಳೆಯಲು ಮತ್ತು ಸೂಕ್ತ ವಾತಾವರಣ ಒದಗಿಸಲು ಸಣ್ಣ ಪ್ರಾಯದ ತಂದೆ, ತಾಯಿಗೆ ಸಾಧ್ಯವಾಗದೆ ಹೋಗಬಹುದು.

ಹದಿಹರೆಯದ ಹುಡುಗ ಹುಡುಗಿಯರು ಹೆಚ್ಚಾಗಿ ಲೈಂಗಿಕ ಸೋಂಕು ಹರಡುವ ಕಾಯಿಲೆಗೆ ಒಳಗಾಗುತ್ತಾರೆ. (ಇದರಲ್ಲಿ ಎಚ್.ಐ.ವಿ/ಏಡ್ಸ್ ಕೂಡ ಒಂದಾಗಿರುತ್ತದೆ). ಕೆಲವು ಸಂದರ್ಭಗಳಲ್ಲಿ ಗರ್ಭಕೋಶದ ಕ್ಯಾನ್ಸರ್‌ಗೆ ಅನೇಕ ಸಣ್ಣ ವಯಸ್ಸಿನ ಹುಡುಗಿಯರು ಒಳಗಾಗುತ್ತಾರೆ. ಸಣ್ಣ ವಯಸ್ಸಿನಲ್ಲಿ ಮಗುವಿಗೆ ಜನ್ಮ ನೀಡುವುದರಿಂದ ಹುಡುಗಿಯ ಶಾರೀರಿಕ ಮತ್ತು ಮಾನಸಿಕ ಬೆಳವಣಿಗೆ ಕುಂಠಿತವಾಗುತ್ತದೆ.

'ಬಾಲ್ಯ ವಿವಾಹ'ದಿಂದ ಅನೇಕ ಸಾಮಾಜಿಕ ಪಿಡುಗುಗಳು ಉದ್ಭವಿಸಿರುವುದು ದಶಮಾನಗಳ ಸಂಶೋಧನೆಯಿಂದ ಕಂಡುಬಂದಿದೆ. ಹೆಚ್ಚು ಕಲಿಯುವ, ಸಾಧಿಸುವ ಉತ್ಸಾಹ ಇರುವ ವಯಸ್ಸಿನಲ್ಲಿ ಹೊರಲಾಗದ ಭಾರ ಹೊತ್ತು ಮಕ್ಕಳು ಕಂಗಾಲಾಗುತ್ತಾರೆ. ಚಿಕ್ಕ ವಯಸ್ಸಿನಲ್ಲಿ ಕುಟುಂಬದ ಜವಾಬ್ದಾರಿ ಒಂದು ಒತ್ತಡವಾಗಿ, ಸಮಸ್ಯೆಗಳು ಎದುರಾದಾಗ ಅದನ್ನು ಪರಿಹರಸಲು ಸಾಧ್ಯವಾಗದೆ ದುಷ್ಚಟಗಳಿಗೆ ದಾರಿ ಮಾಡಿಕೊಡಬಹುದು. ಹೀಗೆ ಬಡತನ, ಪೌಷ್ಠಿಕತೆಯ ಕೊರತೆ ಮತ್ತು ಹಸುಳೆಯರ ಸಾವು. ಇಂತಹ ಅನೇಕ ಸಮಸ್ಯೆಗಳನ್ನು 'ಬಾಲ್ಯ ವಿವಾಹ'ವು ಹೆಚ್ಚಿಸುತ್ತದೆ.

ಸಣ್ಣ ವಯಸ್ಸಿನಲ್ಲಿ ಮದುವೆ ಮಾಡುವುದರಿಂದ ಮಕ್ಕಳು ತಮ್ಮ ವೈಯಕ್ತಿಕ ಮತ್ತು ಶಾರೀರಿಕ ಬೆಳವಣಿಗೆಗೆ ಅಗತ್ಯವಿರುವ ವಾತಾವರಣ ಮತ್ತು ಅವಕಾಶಗಳನ್ನು ಕಳೆದುಕೊಳ್ಳುತ್ತಾರೆ. ಇದರಿಂದ ಹೆಚ್ಚಿನ ಒತ್ತಡಕ್ಕೆ ಒಳಗಾಗುತ್ತಾರೆ.

# ಬಾಲ್ಯ ವಿವಾಹ ಪದ್ಧತಿ ಮಗುವಿಗೆ ಮಾತ್ರವಲ್ಲ, ಸಮಾಜಕ್ಕೂ ಹೊರೆ

ಪ್ರತಿಯೊಂದು ಮಗು ಸಮಾಜಕ್ಕೆ ಒಂದು ಕೊಡುಗೆ. ಪ್ರತಿ ಮಗುವಿನ ಹಕ್ಕುಗಳನ್ನು ರಕ್ಷಿಸುವುದು ನಮ್ಮೆಲ್ಲರ ಮುಖ್ಯ ಕರ್ತವ್ಯಗಳಲ್ಲಿ ಒಂದು.

'ಬಾಲ್ಯ ವಿವಾಹ'ದಿಂದ ಮಕ್ಕಳು ತಮ್ಮ ಹಕ್ಕುಗಳಿಂದ ವಂಚಿತರಾಗುತ್ತಾರೆ. ಇದರಿಂದ ನಾವು ಅವರಿಗೆ ಶಿಕ್ಷಣ ಮುಂತಾದ ಅಗತ್ಯಗಳನ್ನು ಒದಗಿಸುವ ಬದಲು ಮದುವೆಯನ್ನು ಅವರ ಮೇಲೆ ಬಲವಂತವಾಗಿ ಹೇರುತ್ತಿದ್ದೇವೆ.

ಮದುವೆಯಾದ ಸಣ್ಣ ಪ್ರಾಯದವರಿಗೆ ತಮ್ಮ ಕುಟುಂಬಗಳನ್ನು ನಡೆಸಿಕೊಂಡು ಹೋಗುವ ಜವಾಬ್ದಾರಿಯನ್ನು ಹೊರಿಸುತ್ತಿದೇವೆ. ಅದನ್ನು ನಡೆಸಿಕೊಂಡು ಹೋಗುವಷ್ಟು ಸಾಮರ್ಥ್ಯ ಅವರಿಗೆ ಇರುವುದಿಲ್ಲ. ಜೀವನ ನಡೆಸಲು ಅಗತ್ಯವಾದ ಮಾಹಿತಿ ಮತ್ತು ಕೆಲಸ ಮಾಡಲು ಕೌಶಲ್ಯಗಳಿಲ್ಲದೆ ತಮ್ಮ ಮೇಲಿನ ಒತ್ತಡದಿಂದ ಅವರು ಕೆಲವೊಮ್ಮೆ ವಲಸೆ ಹೋಗುತ್ತಾರೆ.

ಕುಟುಂಬ ಯೋಜನೆಯ ಮಾಹಿತಿ ಇಲ್ಲದೆ, ಹೆಣ್ಣು ಮಕ್ಕಳ ಪೌಷ್ಟಿಕತೆಯ ಕೊರತೆಯಿಂದ, ತಾಯಿಯು ಅನಾರೋಗ್ಯದಲ್ಲಿ, ಹುಟ್ಟುವ ಮಕ್ಕಳು ಅಂಗವಿಕಲರಾಗಬಹುದು ಮತ್ತು ಸದಾ ಅನಾರೋಗ್ಯದಿಂದ ಬಳಲಬಹುದು. ಚಿಕ್ಕ ವಯಸ್ಸಿನಲ್ಲಿ ಕುಟುಂಬದ ಜವಾಬ್ದಾರಿ ಬಿದ್ದಾಗ ಅದನ್ನು ನಡೆಸಲು ಆಗದೆ ದುಷ್ಚಟಗಳಿಗೆ ಒಳಗಾಗಬಹುದು. ಹೀಗಾಗಿ, 'ಬಾಲ್ಯ ವಿವಾಹ'ದಂತಹ ಪಿಡುಗನ್ನು ತಡೆಯುವುದು ನಮ್ಮ ಕರ್ತವ್ಯ ಅಲ್ಲವೆ?

# ನಮ್ಮ ಸಂಸ್ಥೆಯ ಕುರಿತು

ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್ (ಸಿ.ಡಬ್ಲ್ಯೂ.ಸಿ.) ನೋಂದಿತ ಸಂಸ್ಥೆ. ಮಕ್ಕಳ ದುಡಿಮೆಯ ಸಮಸ್ಯೆ ಹಾಗೂ ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ಅನೇಕ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ರಾಷ್ಟ್ರೀಯ ಸಂಸ್ಥೆ.

**ಮಕ್ಕಳು ಇಂದಿನ ಪ್ರಜೆಗಳು** ಎಂದು ನಂಬಿರುವ ನಮ್ಮ ಸಂಸ್ಥೆ ಮಕ್ಕಳ ಭಾಗವಹಿಸುವಿಕೆಗೆ ಅತಿ ಪ್ರಾಮುಖ್ಯತೆ ಕೊಡುತ್ತದೆ. ನಮ್ಮ ಪ್ರೇರೇಪಣೆಯಿಂದ ಹುಟ್ಟಿಕೊಂಡ ಬಾಲಕಾರ್ಮಿಕ ಸಂಘಟನೆಯೇ **'ಭೀಮ ಸಂಘ'**. ದುಡಿಯುವ ಮಕ್ಕಳಿಗೆ ಸುಲಭ ಸಾಧ್ಯವನ್ನಾಗಿಸುವ **ಸೂಕ್ತ ಶಿಕ್ಷಣ** ಮತ್ತು ವೃತ್ತಿ ಶಿಕ್ಷಣ ನೀಡುತ್ತಿದ್ದೇವೆ. ನಮ್ಮ ಸಂಸ್ಥೆಯು ಕರ್ನಾಟಕ ರಾಜ್ಯದ ಗ್ರಾಮಾಂತರ ಪ್ರದೇಶದ **60** ಪಂಚಾಯತ್‌ಗಳಲ್ಲಿ ಹಾಗೂ ಪಟ್ಟಣ ಪ್ರದೇಶದಲ್ಲಿ ಬಾಲಕಾರ್ಮಿಕರ ಸಮಸ್ಯೆಗೆ ಸೂಕ್ತ ಪರಿಹಾರ ಕ್ರಮಗಳನ್ನು ಕಂಡುಕೊಳ್ಳಲು ದುಡಿಯುವ ಮಕ್ಕಳು, ಅವರ ಸಮುದಾಯ ಹಾಗೂ ಸ್ಥಳೀಯ ಸರ್ಕಾರದೊಂದಿಗೆ ಕೆಲಸ ಮಾಡುತ್ತಿದೆ.

ಈಗಾಗಲೇ ಕೆಲವು ಪ್ರದೇಶ/ ಪಂಚಾಯತ್‌ಗಳನ್ನು 'ಬಾಲಕಾರ್ಮಿಕ ಪದ್ಧತಿ ರಹಿತ' ಹಾಗೂ 'ಮಕ್ಕಳ ಸ್ನೇಹಿ'ಯಾಗಿ ಘೋಷಿಸಲು ಸಾಧ್ಯವಾಗಿದೆ. ದುಡಿಯುವ ಮಕ್ಕಳೊಂದಿಗೆ ಮಾತ್ರವಲ್ಲದೆ, ಅವರ ಪ್ರದೇಶದ ಎಲ್ಲಾ ಮಕ್ಕಳು ಸರ್ಕಾರದೊಂದಿಗೆ ಭಾಗವಹಿಸಲು ಅನುಕೂಲವಾಗುವಂತೆ, ನಾವು 'ಭೀಮಸಂಘ', ಗ್ರಾಮ ಪಂಚಾಯತ್‌ಗಳ ಜೊತೆ ಸೇರಿ 'ಮಕ್ಕಳ ಪಂಚಾಯತ್' ಎಂಬ ವೇದಿಕೆಯನ್ನು ಸೃಷ್ಟಿಸಿ, ಅದರ ಕಾರ್ಯಚಟುವಟಿಕೆಗೆ ಸೌಕರ್ಯ ಒದಗಿಸುತ್ತಿದ್ದೇವೆ. ನಾವು ಸಮಾನಾಂತರ ವ್ಯವಸ್ಥೆಗಳನ್ನು ಸೃಷ್ಟಿಸದೆ, ಇರುವ ಸರ್ಕಾರದ ವ್ಯವಸ್ಥೆಗಳನ್ನು ಗಟ್ಟಿಗೊಳಿಸುತ್ತಿದ್ದೇವೆ.

ಎಲ್ಲಾ ಮಕ್ಕಳು ತಮ್ಮ ಹಕ್ಕುಗಳನ್ನು ಪಡೆಯಲು ನೆರವು ನೀಡುತ್ತಿರುವ ನಮ್ಮ ಕೆಲಸದಲ್ಲಿ ನೀವು ಸಹ ಭಾಗಿಯಾಗಬೇಕೆಂದು ಕೇಳಿಕೊಳ್ಳುತ್ತೇವೆ.

ನಮ್ಮ ವಿಳಾಸ :

ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್(ಸಿ.ಡಬ್ಲ್ಯೂ.ಸಿ)
303/02, ಎಲ್.ಬಿ.ಶಾಸ್ತ್ರೀನಗರ,
ವಿಮಾನಪುರ - ಅಂಚೆ, ಬೆಂಗಳೂರು-17

## ಸಿ.ಡಬ್ಲ್ಯೂ.ಸಿಯ ಮಕ್ಕಳ ಪ್ರಕಟಣೆಗಳ ವಿವರ : ಬೆಲೆ

| | | |
|---|---|---|
| ಪುಟಕ್ಕೊಂದು ಕಥೆ (ಸಂಪುಟ-I) | .... | ರೂ.20-00 |
| ಪುಟಕ್ಕೊಂದು ಕಥೆ (ಸಂಪುಟ-II) | .... | ರೂ.20-00 |
| ನಮ್ಮ ಹೊಳೆಯಮ್ಮ (ಕನ್ನಡ / ಇಂಗ್ಲೀಷ್) | .... | ರೂ.15-00 |
| ಮಂಜನ ಸುಂಕದ ಕಟ್ಟೆ | .... | ರೂ.10-00 |
| ವಾರಾಹಿಯೊಂದಿಗೆ ಸಂಭಾಷಣೆ | .... | ರೂ.60-00 |
| ವಿಚಾರಣಾ ಸಮಿತಿಯ ವರದಿ-ಮೀನಂಪಟ್ಟಿ | .... | ರೂ.10-00 |
| ಮಕ್ಕಳ ಹಕ್ಕುಗಳು-(5 ಭಿತ್ತಿ ಪತ್ರಗಳು) | .... | ರೂ.40-00 |
| ಭೀಮ ಪತ್ರಿಕೆ - ಗೋಡೆ ಪತ್ರಿಕೆ (ಮಾಸಿಕ ಪ್ರಕಟಣೆ) | .... | ರೂ.10-00 |
| ನಿಮ್ಮ ಆರೋಗ್ಯ ನಿಮ್ಮ ಕೈಯಲ್ಲಿ | .... | ರೂ.40-00 |
| ಮಕ್ಕಳಿಗಾಗಿ ವಿಜ್ಞಾನ | .... | ರೂ.40-00 |
| ಹೋರಾಟದ ಹಾದಿಯಲ್ಲಿ ಭೀಮಸಂಘ (ಸಂಪುಟ- I) | .... | ರೂ.40-00 |
| ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು (ಸಂಪುಟ- I) | .... | ರೂ.40-00 |
| ಕಾಮಾಕ್ಷಿ ಮತ್ತು ರಾಜನ ಕಥೆ | .... | ರೂ.15-00 |
| ಹಕ್ಕಿ ಮತ್ತು ಪಂಜರ | .... | ರೂ.15-00 |
| ನಮ್ಮ ಸಮೀಕ್ಷೆಯ ಕಥೆ (ಕನ್ನಡ / ಇಂಗ್ಲೀಷ್) | .... | ರೂ.40-00 |
| ನಮಗೆ ಯಾವ ಕೆಲಸ ಸಾಧ್ಯ ಮತ್ತು ಯಾವ ಕೆಲಸ ಸಾಧ್ಯವಿಲ್ಲ ( ಕನ್ನಡ / ಇಂಗ್ಲೀಷ್) | .... | ರೂ.40-00 |

‘ಬಾಲ್ಯ ವಿವಾಹ’ ಕಾನೂನಿನ ದೃಷ್ಟಿಯಿಂದ ಅಪರಾಧ. ಅದಕ್ಕೂ ಮಿಗಿಲಾಗಿ ಅದು ನಾವು ಮಕ್ಕಳ ಮೇಲೆ ಹೇರುವ ದೈಹಿಕ ಹಾಗೂ ಮಾನಸಿಕ ಹಿಂಸೆಯಾಗಿದ್ದು, ಸಮಾಜಕ್ಕೆ ಇದೊಂದು ಪಿಡುಗಾಗಿದೆ.

ನಿಮ್ಮ ಮಗುವಿನ ಹಿತದೃಷ್ಟಿಯಿಂದ ಆಲೋಚಿಸಿ, ಆ ಮಗುವಿನ ಇಂದಿನ ಒಳಿತು ಹಾಗೂ ನಾಳಿನ ಹಿತಕ್ಕಾಗಿ ‘ಬಾಲ್ಯ ವಿವಾಹ’ವನ್ನು ತಡೆಗಟ್ಟಿ.

ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್(ಸಿ.ಡಬ್ಲ್ಯೂ.ಸಿ)
ಕರ್ನಾಟಕ, 2005

